


# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿ ತ್ರೈಮಾಸಿಕ

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿಯ ತ್ರೈಮಾಸಿಕ

ಜನವರಿ-ಮಾರ್ಚ್-೨೦೦೩

*ಸಂಪಾದಕರು*

**ಪ್ರೊ. ವಿ. ಚಂದ್ರಶೇಖರ ನಂಗಲಿ**

**ಲಕ್ಷ್ಮೀಪತಿ ಕೋಲಾರ**



**ಕರ್ನಾಟಕ ಸಾಹಿತ್ಯ ಅಕಾಡೆಮಿ**

ಬೆಂಗಳೂರು

ANIKETHANA : A Literary Journal (Quarterly)
Edited by : **Prof. V. Chandrashekara Nangali**
**Lakshmipathi Kolara**
Published by : Registrar, Karnataka Sahithya Academy
Kannada Bhavana, J.C. Road, Bangalore - 2

Pages : xii + 152
Registration No. 45646/88

ಸಂಪುಟ : ೧೪
ಸಂಚಿಕೆ : ೩
ಪ್ರತಿಗಳು : ೧೦೦೦

*ಪ್ರಧಾನ ಸಂಪಾದಕರು*
**ಡಾ. ಗುರುಲಿಂಗ ಕಾಪಸೆ**
ಅಧ್ಯಕ್ಷರು
ಕರ್ನಾಟಕ ಸಾಹಿತ್ಯ ಅಕಾಡೆಮಿ

*ಪ್ರಕಾಶಕರು*
**ವಿ. ಎಸ್. ಮಲ್ಲಿಕಾರ್ಜುನಸ್ವಾಮಿ**
ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ. ಸಿ. ರಸ್ತೆ
ಬೆಂಗಳೂರು - ೫೬೦ ೦೦೨

| | | |
|---|---|---|
| **ಬಿಡಿ ಪ್ರತಿ** | : | **ರೂ. ೨೦/-** |
| **ವಾರ್ಷಿಕ ಚಂದಾ** | : | **ರೂ. ೭೦/-** |
| **ಆಜೀವ ಚಂದಾ** | : | **ರೂ. ೨೫೦/-** |

ಮುಖಪುಟ : **ಸಿ. ಚಂದ್ರಶೇಖರ್**
ಹಿಂಬದಿ ಪುಟ : **ಕೆ. ವೆಂಕಟೇಶ್**
ಕೃಪೆ : **ಕರ್ನಾಟಕ ಲಲಿತಕಲಾ ಅಕಾಡೆಮಿ**, ಬೆಂಗಳೂರು
ರಕ್ಷಾಪುಟ ವಿನ್ಯಾಸ : **ಎಸ್. ಮಂಜುನಾಥ್**

ಲಕ್ಷ್ಮಿ ಮುದ್ರಣಾಲಯ
LAKSHMI MUDRANALAYA
೧೧೭/೨, ೫ನೇ ಮುಖ್ಯರಸ್ತೆ
ಚಾಮರಾಜಪೇಟೆ, ಬೆಂಗಳೂರು - ೧೮
೬೬೧೩೧೨೩, ೬೬೧೮೭೫೨

## 'ಲಿಬರ್ಟಿ ಈಸ್ ಎ ಸ್ಟ್ಯಾಚ್ಯೂ'

ಸರ್ವಾಧಿಕಾರಿಗಳೆಂದೂ ಇತಿಹಾಸದಿಂದ ಪಾಠ ಕಲಿಯುವುದಿಲ್ಲವೆನ್ನುವುದಕ್ಕೆ ಬುಷ್ ಮತ್ತವನ ಸೈತಾನೀ ನೆಲವಾದ ಅಮೆರಿಕಕ್ಕಿಂತ ಸರ್ವಯೋಗ್ಯ ಉದಾಹರಣೆ ಈ ಸದ್ಯ ಮತ್ತಾವುದಿದ್ದೀತು? ಕಂಡ ಕಂಡವರ ಹೊಲಗದ್ದೆಗಳಿಗೆಲ್ಲ ತೊಂಡು ದನದಂತೆ ನುಗ್ಗಿ ಮೇದು ಕೊಬ್ಬಿರುವ ಅಮೆರಿಕ ಯುದ್ಧದ ಅಸಹ್ಯ ತುರುಸಿಂದ ತನ್ನ ಅಂತಿಮ ಅವಸಾನದ ವಿಕೃತ ನೃತ್ಯವನ್ನೀಗ ಆರಂಭಿಸಿದೆ.

ಮೊನ್ನೆ ನಡೆದ ಯುದ್ಧ ಇರಾಕಿಗೆ ಅದು ನೀಡಿದ ಕೊನೆಯ ಹಾಗೂ ಮಾರಣಾಂತಿಕ ಪ್ರಹಾರ. ಅಮೆರಿಕ ಯುದ್ಧ ಗೆದ್ದಿದೆ. ನೆಲಗೆದ್ದಿದೆ. ಆದರೆ ವಿಶ್ವದ ಜನಮನವನ್ನಲ್ಲ; ಶಾಂತಿಯನ್ನಲ್ಲ. ೯೧ರಲ್ಲಿ ಅಮೆರಿಕ ಇರಾಕಿನ ಮೇಲೆ ಪ್ರಾರಂಭಿಸಿದ್ದ ಯುದ್ಧವನ್ನು ಜಗತ್ತಿನ ಕಣ್ಣಿಗೆ ಕಾಣುವ ಹಾಗೆ ನಿಲ್ಲಿಸಿತ್ತಾದರೂ ಮಾಯಾ ಯುದ್ಧವನ್ನದು ಮುಂದುವರೆಸಿಯೇ ಇತ್ತು. ಇರಾಕಿಗೂ ತಿಳಿಯದಂತೆ ಅದು ಜೈವಿಕ ಅಸ್ತ್ರದ ಮೂಲಕ ಸಮರ ನಡೆಸಿತ್ತು. ಒಂದು ದಶಕ ಕಾಲ ಇರಾಕಿನ ಜಲಮೂಲಗಳು, ಕೃಷಿ, ಹೈನುಗಾರಿಕೆಯಷ್ಟೇ ಅಲ್ಲದೆ ಇರಾಕಿಗಳ ಆತ್ಮಚೈತನ್ಯವನ್ನೇ ಹಿಂಗಿಸಿ, ಆರ್ಥಿಕ ನರನಾಡಿಗಳನ್ನು ಕತ್ತರಿಸಿದ್ದ ಅಮೆರಿಕ ಕೊನೆಗೆ ಇರಾಕಿನ ಮೇಲೆ ಯುದ್ಧ ಮಾಡಲು ಹುಡುಕಿದ ಪಿಳ್ಳೆನೆವ ಇರಾಕ್ ಸಮೂಹ ನಾಶದ ಜೈವಿಕ ಹಾಗೂ ರಾಸಾಯನಿಕ ಅಸ್ತ್ರಗಳನ್ನು ತಯಾರಿಸಿದೆಯೆಂಬುದು! ಕಣ್ಣು ಮುಚ್ಚಿ ಹಾಲು ಕುಡಿದ ಮಾಳಬೆಕ್ಕು ಈಗ ಮೀಸೆಯಲ್ಲೇ ನಗುತ್ತಿದೆ.

ಎಲ್ಲ ಶುರುವಾದದ್ದು ೧೯೫೦ರಲ್ಲಿ. ಇರಾನ್‌ನಲ್ಲಿ ಮೊಹಮದ್ ಮೊಸಾದೆಕ್ ಅಧ್ಯಕ್ಷರಾಗಿದ್ದ ಕಾಲವದು. ಆತ ತನ್ನ ದೇಶದ ಬಹುಮುಖ್ಯ ಆರ್ಥಿಕ ಸಂಪನ್ಮೂಲದ ತೈಲೋದ್ಯಮವನ್ನು ರಾಷ್ಟ್ರೀಕರಿಸಿದ. ಇರಾನ್ ತೈಲವನ್ನು ಮನುಷ್ಯರ ನೆತ್ತರಿಗಿಂತಲೂ ಹೆಚ್ಚು ರುಚಿಯೆಂಬಂತೆ ಕುಡಿಯುತ್ತಿದ್ದ ಆಂಗ್ಲೋ-ಇರಾನಿಯನ್ ಆಯಿಲ್ ಕಂಪೆನಿಗೆ ಇದರಿಂದ ಗರಬಡಿದಂತಾಯಿತು. ಕೂಡಲೇ ಅಮೆರಿಕ ಇರಾನಿನ ಮೇಲೆ ಆರ್ಥಿಕ ದಿಗ್ಬಂಧನ ಹೇರಿತು. ಸಿಐಎ ಮೂಲಕ ಆಂತರಿಕ ದಂಗೆಯನ್ನು ಪ್ರಚೋದಿಸಿ ಮೊಹಮದ್‌ರನ್ನು ಪದಚ್ಯುತಗೊಳಿಸಿ ಷಾ ಎಂಬ ತನ್ನ ಕೈಗೊಂಬೆಯನ್ನು ಇರಾನಿನ ಗದ್ದುಗೆಗೇರಿಸಿತು. ಅನಂತರ

ಷಾನನ್ನು ಕಿತ್ತೊಗೆದ ಇರಾನ್ ಕೋಮುವಾದಿ ಖೊಮೇನಿಯ ಕಪಿಮುಷ್ಟಿಗೆ ಸಿಕ್ಕಿಕೊಂಡಿತು. ಇರಾನ್‌ನ ಈ ಬೆಳವಣಿಗೆ ನೆರೆಯ ಇರಾಕಿನ ಸದ್ದಾಂಗೆ ವಿಚಿತ್ರ ಸ್ವಾಭಿಮಾನಿ ಸವಾಲನ್ನೆಸೆಯಿತು. ಎಪ್ಪತ್ತರ ದಶಕದಲ್ಲಿ ಅಧಿಕಾರಕ್ಕೆ ಬಂದ ಸದ್ದಾಂ ಅಮೆರಿಕೆಯನ್ನು ಕೆಣಕುವ ಹಾಗೆಯೇ ತನ್ನ ದೇಶದ ತೈಲೋದ್ಯಮವನ್ನೂ ರಾಷ್ಟ್ರೀಕರಿಸಿದ. ಅಂದಿನಿಂದಲೇ ಅಮೆರಿಕ ಸದ್ದಾಂನ ಅವಸಾನದ ಗಳಿಗೆಗಳನ್ನು ಎಣಿಸುತ್ತ ಬಂತು.

ಸಿಐಎ ಲಕ್ಷಾಂತರ ಡಾಲರುಗಳ ಜಾಲ ಬೀಸಿತು. ತೈಲ ಸಂಪದ್ಭರಿತವಾದ ಉತ್ತರ ಇರಾಕಿನ ಕುರ್ದಿಶ್ ಜನಾಂಗವನ್ನು ಸ್ವತಂತ್ರ ದೇಶಕ್ಕಾಗಿ ಹೋರಾಡುವಂತೆ ಸದ್ದಾಂ ವಿರುದ್ಧ ಎತ್ತಿಕಟ್ಟಿತು. ಅಮೆರಿಕದ ಅಧ್ಯಕ್ಷ ನಿಕ್ಸನ್, ಕಾರ್ಯದರ್ಶಿ ಹೆನ್ರಿ ಕಿಸಿಂಜರ್ ಜೊತೆ ಇರಾನಿನ ಆಗಿನ ಅಧ್ಯಕ್ಷ ಷಾ ಕೂಡ ಸದ್ದಾಂಗೆ ನಿದ್ದೆ ಕೆಡಿಸತೊಡಗಿದರು. ಕುರ್ದಿಗಳನ್ನು ಎತ್ತಿ ಕಟ್ಟಿದ ಅಮೆರಿಕೆಯೇ ಸದ್ದಾಂಗೂ ಕುರ್ದಿಗಳನ್ನು ದಮನ ಮಾಡಲು ಗುಪ್ತ ನೆರವಿನ ಹಸ್ತ ನೀಡಿತು. ಮೊದಲ ವರ್ಷ ಅದು ಕೃಷಿ ನೆರವಿನ ನೆಪದಲ್ಲಿ ೫೦ ಕೋಟಿ ಡಾಲರುಗಳನ್ನು ನೀಡಿತು. ಸದ್ದಾಂ ಕುರ್ದಿಗಳನ್ನು ಯಶಸ್ವಿಯಾಗಿ ಸದೆಬಡಿಯಲು, ಹೆಲಿಕಾಪ್ಟರ್ ಆಂತ್ರಾಕ್ಸ್, ಜೈವಿಕ, ರಾಸಾಯನಿಕ ಅಸ್ತ್ರಗಳೊಂದಿಗೆ ಮರುವರ್ಷ ೧೦೦ ಕೋಟಿ ಡಾಲರುಗಳ ನೆರವು ಹರಿಸಿತು. ಸದ್ದಾಂನೊಳಗೆ ಸರ್ವಾಧಿಕಾರಿ ಕ್ರೌರ್ಯವನ್ನು ಹುಟ್ಟು ಹಾಕಿ, ಅದನ್ನು ವಿಕಾರವಾಗಿ ಕಕ್ಕಿಸಿ, ಜಗತ್ತಿನೆದುರಿಗೆ ಆತನನ್ನು ಮಿಲಿಟರಿ ಸರ್ವಾಧಿಕಾರಿಯೆಂಬಂತೆ ಚಿತ್ರಿಸಿತು. ಜಗತ್ತು ಸದ್ದಾಂನ ಕ್ರೌರ್ಯ ಕಂಡು ಛೀ ಛೀ ಎನ್ನುತ್ತಿರುವಾಗ ಅಮೆರಿಕ ತನ್ನ ದಾಳ ಬದಲಿಸಿತು. ಸದ್ದಾಂನನ್ನು ಸರ್ವಾಧಿಕಾರಿಯ ಪಟ್ಟಿಗೆ ಸೇರಿಸಿತು. ವಿರೋಧಾಭಾಸ ವೇನೆಂದರೆ ಅದೇ ಕುರ್ದಿಶ್ ಜನಾಂಗದ ಬಂಡುಕೋರ ನಾಯಕ ಅಬ್ದುಲ್ ಓಕಲಾನ್‌ನನ್ನು ತನ್ನ ದಾಳಕ್ಕೆ ತಕ್ಕಂತೆ ಕುಣಿಸಿಕೊಂಡ ಅಮೇರಿಕ ಆತನ ಅಗತ್ಯ ತೀರಿದೊಡನೆ ಆತನನ್ನು ಟರ್ಕಿಯ ಮಿಲಿಟರಿ ಸರ್ವಾಧಿಕಾರೀ ಸರ್ಕಾರದ ಮೂಲಕ ಬಂಧಿಸಿ ಶಾಶ್ವತವಾಗಿ ಸೆರೆಮನೆಗೆ ದೂಡಿಸಿತು. ಇಂದಿಗೂ ಕುರ್ದಿಶ್ ಜನಾಂಗದ ಹೋರಾಟಗಾರರ ನಾಯಕ ಅಬ್ದುಲ್ ಓಕಲಾನ್ ಅಮೆರಿಕೆಯ ಮಿತ್ರ ರಾಷ್ಟ್ರವಾದ ಟರ್ಕಿಯ ಸೆರೆಮನೆಯಲ್ಲಿ ತನ್ನದಲ್ಲದ ತಪ್ಪಿಗಾಗಿ ಕಂಬಿ ಎಣಿಸುತ್ತಿದ್ದಾನೆ.

ಅಮೆರಿಕ ತೋರಿಸಿದ್ದ ಸಾಮ್ರಾಜ್ಯಶಾಹಿ ರುಚಿಯ ಅಮಲು ಹತ್ತಿಸಿಕೊಂಡಿದ್ದ ಸದ್ದಾಂ ತನ್ನ ಯಜಮಾನನಾದ ಅಮೆರಿಕೆಯ ಇಷ್ಟಕ್ಕೆ ವಿರುದ್ಧವಾಗಿ ಕುವೈತನ್ನು ಆಕ್ರಮಿಸಿಕೊಂಡಾಗ ಅದು ಆತನ ಮೂರ್ಖತನದ ಪರಮಾವಧಿಯಾಗಿತ್ತು. ಆತನ ಅವಸಾನದ ದಾರಿ ಸುಗಮಗೊಂಡಿತು.

ಬಾಗ್ದಾದಿನ ಮೇಲೆ ನ್ಯಾಟೋ ಬಾಂಬುಗಳು ಭೋರ್ಗರೆದವು. ನಂತರ ಅದರ ಸದ್ದಡಗಿತು. ಸದ್ದಿಲ್ಲದ ಸಮರ ೯೫ರಿಂದ ಪ್ರಾರಂಭವಾಯಿತು. ೧೯೬೦ರಲ್ಲಿ ಅಮೆರಿಕೆಗೆ ತಲೆಶೂಲೆಯಾಗಿದ್ದ Screw worm (Cochliomyia hominivoras) ಎಂಬ ಪರಾವಲಂಬಿ ಕೀಟ ಅಮೆರಿಕೆಯ ಸೈನ್ಯದಲ್ಲಿ ಜೈವಿಕ ಅಸ್ತ್ರವಾಗಿ ಸೇರ್ಪಡೆಗೊಂಡಿತ್ತು.

ಬಿಸಿ ರಕ್ತದ ಪ್ರಾಣಿಗಳ ರಕ್ತ ಹೀರಿ, ಆ ಗಾಯದ ಮೇಲೆಯೇ ಮೊಟ್ಟೆಯಿಟ್ಟು ಸಂತಾನ ಬೆಳೆಸುವ ಈ ಕೀಟದ ಆಕ್ರಮಣಕ್ಕೆ ತುತ್ತಾದ ಪ್ರಾಣಿ ವಾರದೊಳಗೆ ಮರಣಿಸುತ್ತದೆ. Screw worm ನ ಗಂಡು ಕೀಟಕ್ಕೆ ಗ್ಯಾಮಾಕಿರಣ ಹಾಯಿಸಿ ಅದನ್ನು ಗೊಡ್ಡು ಮಾಡಿ ತನ್ನ ದೇಶವನ್ನು ರಕ್ಷಿಸಿಕೊಂಡಿದ್ದ ಅಮೆರಿಕ, ಅದೇ ಸಂತಾನ ಶಕ್ತಿಯುಳ್ಳ ಲಕ್ಷಾಂತರ ಕೀಟಗಳನ್ನು ಪ್ರಯೋಗಾಲಯದಲ್ಲಿ ಸೃಷ್ಟಿಸಿ ಇರಾಕಿನ ಗೋಧಿ, ಸೌತೇಕಾಯಿ ಬೆಳೆಯುವ ಮೊಸುಲ್ ಮತ್ತು ಸಬರಿಯಾ ಅಲ್ ಗಾಬ್ರಿಯಾದ ಲಕ್ಷಾಂತರ ಎಕರೆಗಳ ಮೇಲೆ ಸಿಂಪಡಿಸಿತು, ಅಷ್ಟೆ. ಇರಾಕಿನ ಗೋಧಿ ಖಣಜಗಳು ಖಾಲಿಯಾದವು. ಹಸುಗಳು ಕೀಟ ಭಾದೆಯಿಂದ ಮರಣಿಸ ತೊಡಗಿದವು. ಕೋಳಿ ಸಾಕಾಣಿಕೆಯ ಉದ್ಯಮ ನೆಲಕಚ್ಚಿತು. ಇರಾಕಿನ ಮಕ್ಕಳೂ ಅಮೆರಿಕನ್ ಕೀಟದ ಧಾಳಿಗೆ ತುತ್ತಾಗತೊಡಗಿದರು. ಮಿಲಿಟರಿ ಉದ್ದೇಶಗಳಿಗೆ ಬಳಸಬಹುದೆಂಬ ನೆಪವೊಡ್ಡಿ ಅಮೆರಿಕ ಇರಾಕಿಗೆ ಕ್ರಿಮಿನಾಶಕಗಳ ಸರಬರಾಜನ್ನು ಕೂಡ ತಡೆಯಿತು. ಇನ್ನುಳಿದ ಇತರೆ ಮಾನವ ಬಳಕೆಯ ಔಷಧಗಳನ್ನು ಕೂಡ ನಿಯಂತ್ರಿಸಿತು. ಕೆಲವೇ ವರ್ಷಗಳಲ್ಲಿ ಇರಾಕ್ ಆಹಾರದ ವಿಷಯದಲ್ಲಿ ಪರಾವಲಂಬಿಯಾಯಿತು.

೧೯೯೧ರಿಂದ ಒಟ್ಟು ೧೫ ಲಕ್ಷ ಇರಾಕಿ ಜನ ಸಾವಿಗೀಡಾಗಿದ್ದಾರೆ. ದುಃಖದ ಸಂಗತಿಯೆಂದರೆ ಅದರಲ್ಲಿ ೧.೨ ಲಕ್ಷ ಸಾವುಗಳು ಮಕ್ಕಳದ್ದು. ಮಕ್ಕಳ ಪ್ರಾಣಗಳನ್ನು ಚೆಲ್ಲಾಡುವ ಅಮೆರಿಕದ ಬರ್ಬರ ರಾಜಕಾರಣ ಕೊಲ್ಲಿ ತೈಲದಷ್ಟೇ ಸಲೀಸಾಗಿ ಮಾನವ ರಕ್ತವನ್ನು ಕುಡಿಯುತ್ತಿದೆ. ಅಮೆರಿಕೆಯ ಎಕಾನಮಿಯೆಂಬುದೇ ರಕ್ತಪಿಪಾಸು ಎಕಾನಮಿಯಾಗಿ ಬಿಟ್ಟಿದೆ. ಅಮೆರಿಕೆಯ ಜೆನ್ನಿಫರ್ ಡಿಕ್ಸನ್ ಹಾಗೂ ಜಾರ್ಜ್ ಪೆಂಪ್ರೆ ಎಂಬುವವರು ೯೮ರಲ್ಲಿ ನಡೆಸಿದ ಅಧ್ಯಯನದಿಂದಾಗಿ ಈ ಭೀಕರ ಸತ್ಯಗಳು ಹೊರಬಿದ್ದವು. ವಿಶ್ವಸಂಸ್ಥೆಯ ಆಹಾರ ಮತ್ತು ಕೃಷಿ ಸಂಘಟನೆಯ ಹಿರಿಯ ಅಧಿಕಾರಿ ಬ್ರಿಯಾನ್ ಹರ್ಸೆಯವರು ತಮ್ಮ ಅಧ್ಯಯನದ ವರದಿಯಲ್ಲಿ ಈ Screw worm ಗೆ ಇರಾಕ್‌ನಲ್ಲಿ ಇತಿಹಾಸವಿಲ್ಲವೆಂದು ಸ್ಪಷ್ಟಪಡಿಸಿರುವುದರ ಆಧಾರದ ಮೇಲೆ ಹಾಗೂ ಈ ಕೀಟ ಉತ್ತರ, ಮಧ್ಯ ಹಾಗೂ ದಕ್ಷಿಣ ಅಮೆರಿಕೆಯಲ್ಲಿದ್ದ ಪುರಾವೆಗಳ ಆಧಾರದ ಮೇಲೆ ಇದು ಖಂಡಿತ ಇರಾಕ್ ಮೇಲೆ ಅಮೆರಿಕ ಪ್ರಯೋಗಿಸಿದ ಜೈವಿಕ ಅಸ್ತ್ರವೆಂಬುದು ದೃಢಪಡುತ್ತದೆ.

ಆದರೆ ಅಮೆರಿಕೆಗೆ ಹೋಗಬೇಕಿದ್ದ ವಿಶ್ವಸಂಸ್ಥೆಯ ಸಮೂಹ ನಾಶದ ಶಸ್ತ್ರಾಸ್ತ್ರ ತಪಾಸಣಾ ಅಧಿಕಾರಿಗಳು ಈ ಬಡಪಾಯಿ ಇರಾಕಿಗೆ ಬರುವಂತಾದ ಹಿನ್ನೆಲೆಯಲ್ಲಿನ ಸಂಚಿನ ರಾಜಕಾರಣ ವೆನ್ನುವುದೇನು? ಆದರ ನಿಜವಾದ ಉದ್ದೇಶವೇನು? ಇದನ್ನು ತಡೆಯಬಲ್ಲ ಶಕ್ತಿಯೇ ಇಂದು ಈ ಜಗತ್ತಿನಲ್ಲಿ ಇಲ್ಲವಾಗಿದೆಯೇ?

ತೆಂಗಿನ ಬೆಳೆಗೆ ಹಬ್ಬಿರುವ ನುಸಿಪೀಡೆ ಅಮೆರಿಕಾ ಕಂಪನಿಯಾದ ಕೋಕಾ ಕೋಲಾದ ಸಂಚು ಎಂಬ ರೈತ ಸಂಘದ ಆರೋಪವನ್ನು ಯಾರೂ ಯಾಕೆ ಗಂಭೀರವಾಗಿ ಪರಿಗಣಿಸುತ್ತಿಲ್ಲ? ಜೈರೆಯಲ್ಲಾದ 'ಎಬೋಲಾ' ಅಮೆರಿಕೆಯ ಜೈವಿಕ ಅಸ್ತ್ರವಲ್ಲವೆನ್ನುವುದು

ಹೇಗೆ? ಅಥವ ಸೂರತ್‌ನಲ್ಲಿ ಸಿಡಿದ ಪ್ಲೇಗಿನ ಮಾರಿ? ಈಗ ಇಡೀ ಚೈನಾವನ್ನು ನಡುಗಿಸುತ್ತಿರುವ ಸಾರ್ಸ್ ಎಂಬ ಹೊಸ ರೋಗದ ಮೂಲ ಎಲ್ಲಿಯದು? ನಪುಂಸಕ ಬೀಜಗಳಾದ Terminated Seeds ಅಥವ Genetically engineered food, B.t. Cotton, ಇವೆಲ್ಲಾ ಮಾಯಾವೇಷದಾರಿಗಳಾದ ಜೈವಿಕ ಅಸ್ತ್ರಗಳಲ್ಲವೆಂದು ಯಾರಾದರೂ ತಾನೇ ಹೇಗೆ ಖಚಿತವಾಗಿ ಹೇಳಬಲ್ಲರು? ಸಹಜ ಹಾಗೂ ಪರಂಪರಾಗತವಾದ ದೇಸಿ ಕೃಷಿ ಪದ್ಧತಿಗಳನ್ನೂ, ದೇಸೀ ಔಷಧ ಜ್ಞಾನಗಳನ್ನು, ಜೀವನಾಧಾರವಾದ ಕುಶಲ ಕಲೆಗಳನ್ನು ಅತಂತ್ರಗೊಳಿಸುವ ಮೂಲಕ ಸ್ವಾವಲಂಬನೆಯ ನಡು ಮುರಿಯುವ ಈ ಷಡ್ಯಂತ್ರಗಳನ್ನು ತೃತೀಯ ಜಗತ್ತಿನ ಜನ ಅರಿಯುವುದಾದರೂ ಎಂದು? ಹೇಗೆ?

ಪೌಷ್ಠಿಕಾಂಶಭರಿತ ಆಹಾರದ ಕೊರತೆಯಿಂದಲೂ, ಅಮೆರಿಕದ Screw Worm ನ ಹಾವಳಿಯಿಂದಲೂ, 'ಬಳಸಿದ ಯುರೇನಿಯಂ'ನ ಬಾಂಬುಗಳಿಂದಾಗಿ ತಲೆದೋರಿರುವ Blood Cancer ಹಾಗೂ Pre-mature birth ಗಳಿಂದಾಗಿ ಇಂದಿಗೂ ಇರಾಕಿನಲ್ಲಿ ತಿಂಗಳೊಂದಕ್ಕೆ ೬೦೦೦ ಮಂದಿ ಮಕ್ಕಳು - ಅದರಲ್ಲಿ ಬಹುತೇಕರು ೫ ವರ್ಷದೊಳಗಿನವರು - ಸಾವಿಗೀಡಾಗುತ್ತಿದ್ದಾರೆಂದು ವಿಶ್ವಸಂಸ್ಥೆಯ ಅಧ್ಯಯನವೇ ತಿಳಿಸಿದೆ.

ಅಮೆರಿಕಾದ ಈ ಯುದ್ಧಗಳ ಹಿಂದೆ ಇರುವಂತಹ ಲಾಬಿಯ ಬಗ್ಗೆಯೂ ಮಾತುಗಳು ಕೇಳಿಬರುತ್ತಿವೆ. ಭಾರತೀಯ ಸಂಜಾತ ಅಮೆರಿಕನ್ ವಿಜ್ಞಾನಿ ಹಾಗೂ ವೈದ್ಯರಾದ ಡಾ. ಮಥಾಯಿಸ್ ರಥ್ ಎಂಬುವವರು ಇದು ಸ್ಪಷ್ಟವಾಗಿ Pharmaceuticals ಮತ್ತು Petrochemicalsನ ಶಕ್ತಿಗಳದೇ ಕೈವಾಡ ಎಂದು ಸ್ಪಷ್ಟಪಡಿಸುವ ಅಂಕಿ ಅಂಶಗಳು ಹಾಗೂ ವಾದಗಳೊಂದಿಗೆ ಅಮೆರಿಕಾದ 'ದಿ ನ್ಯೂಯಾರ್ಕ್ ಟೈಮ್ಸ್' ಪತ್ರಿಕೆಯ ಫೆಬ್ರವರಿ ೨೮ರ ಸಂಚಿಕೆಯಲ್ಲಿ ಇಡೀ ಒಂದು ಪುಟದ ಜಾಹಿರಾತನ್ನು ಪ್ರಕಟಿಸಿದ್ದಾರೆ. ಈ ಜಾಹಿರಾತು ಬುಷ್‌ಗೆ ಬರೆದಿರುವ ಬಹಿರಂಗ ಪತ್ರವಾಗಿದೆ. ಅದರ ಪ್ರಕಾರ ಅಮೆರಿಕೆಯ Bayer ಹಾಗೂ ಜಗತ್ತಿನ ಎರಡನೇ ಅತಿದೊಡ್ಡ ಔಷಧ ಕಂಪನಿಯಾದ SKB (Smith Kline Beecham) ಗಳು ಅಮೆರಿಕದ ಯುದ್ಧೋನ್ಮಾದಗಳ ಹಿಂದಿನ Catalysticಗಳಾಗಿವೆ. ಸೆಪ್ಟೆಂಬರ್ ೧೧ರ ಧಾಳಿಯಲ್ಲಿ ಸತ್ತವರು ೨೬೦೦ ಜನ. ಆದರೆ ಈ ಔಷಧ ಕಂಪನಿಗಳು ತಯಾರಿಸುವ ಔಷಧಗಳ Side effects ನಿಂದಾಗಿ ಪ್ರತಿ ೧೦ ದಿನಗಳಿಗೊಮ್ಮೆ ಜಗತ್ತಿನಾದ್ಯಂತ ೨೬೦೦ ರಷ್ಟು ಜನ ಸಾಯುತ್ತಲೇ ಇದ್ದಾರೆ. ಈ ಅಂಕಿ ಅಂಶಗಳ ಆಧಾರದ ಮೇಲೆ ತರ್ಕಿಸಿದಾಗ ಯಾರು ನಿಜವಾದ ಬರ್ಬರ ಭಯೋತ್ಪಾದಕರು, ಯಾರನ್ನು ಯಾರು ರಕ್ಷಿಸುತ್ತಿದ್ದಾರೆ ಮತ್ತು ಯಾಕಾಗಿ, ಯಾರ ಮೇಲೆ ಯಾರು ಸಮರ ಸಾರಬೇಕಿತ್ತು ಎಂಬ ಸತ್ಯಗಳೆಲ್ಲ ನಿಚ್ಚಳವಾಗಿ ಬಿಡುತ್ತವೆ.

ಯುದ್ಧಗಳಾಗುತ್ತಲೇ ಇರಬೇಕು, ಜೈವಿಕ ಅಸ್ತ್ರಗಳು ಬಳಕೆಯಾಗುತ್ತಿರಬೇಕು. ಆಗಷ್ಟೇ ಹೆಚ್ಚುವ ರೋಗಗಳ ಮೇಲೆಯೇ ಆಧಾರಪಟ್ಟಿರುವ ಅತಿ ಹೆಚ್ಚು ಬಂಡವಾಳ ಹೂಡಿಕೆಯ

ಈ ಔಷಧ ಕಂಪನಿಗಳು ಲಾಭಗಳಿಸಬಲ್ಲವಷ್ಟೇ? ಅವರ ವ್ಯಾಪಾರ ಸುಸೂತ್ರ ಸಾಗಬಲ್ಲದಷ್ಟೇ? ಇವರೊಂದಿಗೆ ಶಸ್ತ್ರಾಸ್ತ್ರ ತಯಾರಿಕೆಯವರ ಲಾಭವೂ ಕೂಡ ಹೀಗೆ ಇದೇ ತರ್ಕದ ಆಧಾರದ ಮೇಲೆ - ಯುದ್ಧಗಳು ನಿರಂತರ ನಡೆಯುತ್ತಿರುವುದರ ಮೇಲೆಯೇ ಅವಲಂಬಿಸಿದೆಯಲ್ಲವೇ? ಇಂತಹ ಶಸ್ತ್ರಾಸ್ತ್ರ ಕಂಪನಿಗಳ ಒಡೆತನದಲ್ಲೇ ಅಮೆರಿಕೆಯ ಹಲವು ಟಿವಿ ಚಾನಲ್‌ಗಳಿವೆಯೆಂಬುದೂ ನೆನಪಿರಲಿ.

೧೯೨೨ರ ಸೆಪ್ಟೆಂಬರ್ ೧೧ರಂದು ಯಹೂದಿಗಳಿಗೊಂದು ದೇಶ ಕಟ್ಟಿಕೊಡಲಿಕ್ಕಾಗಿ ಪ್ಯಾಲೆಸ್ಟೈನರ ಮೇಲೆ ಬ್ರಿಟನ್ ಆಕ್ರಮಣ ನಡೆಸಿತು. ಅದೇ ೧೯೭೩ರ ಸೆಪ್ಟೆಂಬರ್ ೧೧ ರಂದು ಚಿಲಿ ದೇಶದಲ್ಲಿ ಪ್ರಜಾಸತ್ತಾತ್ಮಕವಾಗಿ ಆಯ್ಕೆಯಾಗಿದ್ದ ಅಲೆಂಡೆ (ಈತನ ಯಶಸ್ಸಿನ ಹಿಂದೆ ಜಗದ್ವಿಖ್ಯಾತ ಕವಿ ಪಾಬ್ಲೊ ನೆರೂಡನಿದ್ದ) ಯನ್ನು ಸಿಐಎ ಬೆಂಬಲಿತ ಜನರಲ್ ಪಿನೋಶೆ ಕೆಡವಿ ಉರುಳಿಸಿದ. ಅಮೆರಿಕೆಯ ಸಾಮ್ರಾಜ್ಯಶಾಹಿ ದಾಹಕ್ಕೆ ಹೀಗೆ ಬಲಿಯಾದ ದೇಶಗಳ ಸಂಖ್ಯೆ ದಿನೇ ದಿನೇ ಬೆಳೆಯುತ್ತಿದೆ. ಈಗಲೂ ಆ ರಕ್ತ ಪಿಪಾಸು ಪಟ್ಟೆ ನಿಂತಿಲ್ಲ. ಸಿರಿಯಾ, ಇರಾನ್, ಉತ್ತರ ಕೊರಿಯಾ, ಜೋರ್ಡಾನ್, ಈಜಿಪ್ಟ್, ನಂತರ ಅಮೆರಿಕೆಯೆಂಬ ಮೃತ್ಯು ದೂತನ ಕೈಗಳು ಭಾರತದ ಬಾಗಿಲನ್ನು ಕೂಡ ಬಡಿಯುವ ದಿನ ದೂರವಿಲ್ಲ. ಅಣುಬಾಂಬು ಹೊಂದಿರುವ, ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಶಾಶ್ವತ ಸದಸ್ಯ ರಾಷ್ಟ್ರವಾದ ಫ್ರಾನ್ಸಿನ ಬಗ್ಗೆಯೇ ಈಗ ಅಮೆರಿಕ ಗುಟುರು ಹಾಕುತ್ತಿರುವುದನ್ನು ನಾವು ನೋಡುತ್ತಿದ್ದೇವೆ.

ವಿಯೆಟ್ನಾಂನಲ್ಲಿ ಇಡೀ ಒಂದು ಹಳ್ಳಿಯನ್ನು ಜನರ ಸಮೇತ ಇಡಿಇಡಿಯಾಗಿ ದಹಿಸಿ ಹಾಕಿದ ಅಮೆರಿಕನ್ ಜನರಲ್ ಒಬ್ಬರನ್ನು 'ಹಾಗೇಕೆ ಮಾಡಿದಿರಿ?' ಎಂದು ಪತ್ರಕರ್ತರೊಬ್ಬರು ಪ್ರಶ್ನಿಸಿದಾಗ ಆತ 'ಕಮ್ಯೂನಿಸ್ಟರಿಂದ ವಿಯೆಟ್ನಾಮಿಗಳನ್ನು ರಕ್ಷಿಸಲು' ಎಂದನಂತೆ! ಅಮೆರಿಕಾದ ಒಟ್ಟು ಮನೋಧರ್ಮವನ್ನು ಈ ಜನರಲ್‌ನ ಮಾತು ಪ್ರತಿನಿಧಿಸುವಂತಿಲ್ಲವೇ? ವಿಯೆಟ್ನಾಂ ಜಾಗದಲ್ಲಿ ಈಗ ಇರಾಕ್ ಇದೆ. ಅದಷ್ಟೇ ವ್ಯತ್ಯಾಸ. ಮುಂದೆ? ಇನ್ನೂ ಮುಂದೆ?

ಫಾಸ್ಟರ್ ನೈಮ್ಯಾಲರ್ ಎಂಬ ಕವಿಯ ಒಂದು ಪದ್ಯ ನೆನಪಾಗುತ್ತಿದೆ. ಕೇವಲ ಒಂದು ಸಣ್ಣ ಬದಲಾವಣೆಯೊಂದಿಗೆ ಇಡೀ ಪದ್ಯವನ್ನು ಇಲ್ಲಿ ನೀಡುತ್ತಿದ್ದೇವೆ, 'ಅನಿಕೇತನ'ದ ಓದುಗರಿಗಾಗಿ.

ಮೊದಲವರು
ಕಮ್ಯುನಿಸ್ಟರನ್ನು ಹುಡುಕಿ ಬಂದರು
ನಾನು ಬಾಯಿ ಬಿಡಲಿಲ್ಲ
ಏಕೆಂದರೆ ನಾನು ಕಮ್ಯುನಿಷ್ಟನಾಗಿರಲಿಲ್ಲ

ನಂತರ ಅವರು
ಮುಸ್ಲಿಮರನ್ನು ಹುಡುಕಿ ಬಂದರು

ನಾನಾಗ ಬಾಯಿ ಬಿಡಲಿಲ್ಲ
ಏಕೆಂದರೆ ನಾನು ಮುಸ್ಲಿಮನಾಗಿರಲಿಲ್ಲ

ಆನಂತರ ಅವರು
ಕ್ಯಾಥೋಲಿಕ್ಕರನ್ನು ಹುಡುಕಿ ಬಂದರು
ಆಗಲೂ ನಾನು ಬಾಯಿ ಬಿಡಲಿಲ್ಲ
ಏಕೆಂದರೆ ನಾನು ಕ್ಯಾಥೋಲಿಕನಾಗಿರಲಿಲ್ಲ

ಈಗವರು ನನ್ನನ್ನೆ
ಹುಡುಕಿಬಂದರು
ಆಗ ನನ್ನ ಪರವಾಗಿ ದನಿ ಎತ್ತುವವರೇ
ಯಾರೂ ಉಳಿದಿರಲಿಲ್ಲ

ಅಮೆರಿಕದ ಭಯಾನಕವೂ, ಮಾನವನ ಇತಿಹಾಸದಲ್ಲೇ ಅತ್ಯಂತ ಕ್ರೂರವೂ ಆದ ಸಾಮ್ರಾಜ್ಯಶಾಹಿಯ ಈ ಬಗೆಯ ಸರ್ವಾಧಿಕಾರ ಪ್ರವೃತ್ತಿಯನ್ನು ನಾವು ಈಗಲೇ ಖಂಡಿಸದಿದ್ದಲ್ಲಿ ನಾಳೆ, ನಾಡಿದ್ದು ಅಥವ ಆಚೆ ನಾಡಿದ್ದು ಅಥವ ಖಂಡಿತ ಮುಂದೆಂದೋ ನಮ್ಮ ಸರದಿ! ಒಬ್ಬ ನೀಗ್ರೋ ಕವಿಯು ಎಂದೋ ಕೇಳಿದ ಚುಟುಕವೊಂದನ್ನು ಕೇವಲ ನೆನಪಿನಿಂದ ಇಲ್ಲಿ ಬರೆಯ ಬೇಕೆನಿಸುತ್ತಿದೆ. ನಾವು ಅರ್ಥ ಮಾಡಿಕೊಂಡಂತೆ ಅದು ಹೀಗಿದೆ : 'In America/Liberty/ is a Statue?' ಇನ್ನೇನು ಹೇಳಬೇಕು? ಈ ಸದ್ಯ ಅಮೆರಿಕದ ವಸ್ತುಗಳನ್ನು ಬಹಿಷ್ಕರಿಸಿ ಅದರ ಆರ್ಥಿಕ ಬೇರುಗಳನ್ನು ದುರ್ಬಲ ಗೊಳಿಸುವುದರ ಮೂಲಕ ನಾವು ನಮ್ಮೆಲ್ಲರ ಪ್ರತಿಭಟನೆಯನ್ನು ವ್ಯಕ್ತಪಡಿಸಬಹುದಲ್ಲವೇ? ಬಿತ್ತಿದಂತೆ ಬೆಳೆ ಎಂಬುದನ್ನು ಅಮೆರಿಕ ಮರೆತಂತಿದೆ.

ಕವಿಗಳೂ, ಲೇಖಕರೂ ಆದ ನಮಗೆ ಇಂತಹ ಜಾಗತಿಕ ಸಂದಿಗ್ಧತೆಯ ಸಂದರ್ಭದಲ್ಲಿ ಬಹಳ ಮಹತ್ವದ್ದೆನಿಸುವ ಮಾನವೀಯ ಹಾಗೂ ನೈತಿಕ ಜವಾಬ್ದಾರಿ ಇದೆ ಅನಿಸುವುದಿಲ್ಲವೇ? ಭಾರತೀಯ ಲೇಖಕರನ್ನು ಪ್ರತಿನಿಧಿಸುವಂತಹ ಅರುಂಧತಿರಾಯ್ ಲೇಖನ ಈ ಬಗ್ಗೆ ಬಹಳಷ್ಟನ್ನು ಹೇಳುತ್ತಿದೆ ಎನಿಸುತ್ತಿದೆ. ಸಹಕರಿಸಿದ ಲೇಖಕರಿಗೆ, ಲಲಿತ ಕಲಾ ಅಕಾಡೆಮಿಯ ರಿಜಿಸ್ಟ್ರಾರ್ ಮುನಿರಾಜಯ್ಯ ಮತ್ತವರ ಬಳಗಕ್ಕೆ ಕೃತಜ್ಞತೆಗಳು. ಎಂದಿನಂತೆ ಈ ಸಂಚಿಕೆಯೂ ನಿಮಗೆ ಇಷ್ಟವಾಗಬಹುದೆಂದು ನಂಬಿದ್ದೇವೆ.

*– ಸಂಪಾದಕರು*

## ಪರಿವಿಡಿ

### ಭಾಗ - ೧

ಭಾಗ - ೨

# ಅರುಂಧತಿರಾಯ್ ಲೇಖನ : 'ಕಮ್ ಸೆಪ್ಟೆಂಬರ್'

ಕನ್ನಡಕ್ಕೆ : **ಜೆ. ಬಾಲಕೃಷ್ಣ**

ತಮ್ಮ ಬರಹಗಳಿಗೆ ವಸ್ತುವನ್ನು ಈ ಜಗತ್ತಿನಿಂದ ತಾವೇ ಹೆಕ್ಕಿ ತೆಗೆಯುತ್ತೇವೆಂದು ಲೇಖಕರು ಭಾವಿಸಿದ್ದಾರೆ. ಅವರಲ್ಲಿನ ದುರಹಂಕಾರವೇ ಈ ಭಾವನೆಗೆ ಕಾರಣವೆಂದು ನನಗನ್ನಿಸತೊಡಗಿದೆ. ವಾಸ್ತವಾಂಶವೆಂದರೆ, ವಸ್ತುವಿಷಯಗಳೇ ಲೇಖಕರನ್ನು ಈ ಜಗತ್ತಿನಿಂದ ಹೆಕ್ಕಿ ತೆಗೆಯುತ್ತವೆ. ವಸ್ತುವಿಷಯಗಳು ತಮ್ಮಿಂತಾವೇ ನಮ್ಮೆದುರು ತೆರೆದುಕೊಳ್ಳುತ್ತವೆ. ಸಾರ್ವಜನಿಕ ನಿರೂಪಣೆ, ಖಾಸಗಿ ನಿರೂಪಣೆ - ಇವು ನಮ್ಮನ್ನು ಆಕ್ರಮಿಸಿಕೊಳ್ಳುತ್ತವೆ. ನಮಗೆ ಆಜ್ಞೆ ಮಾಡುತ್ತವೆ. ತಮ್ಮನ್ನು ನಿರೂಪಿಸಿರೆಂದು ಒತ್ತಾಯ ಮಾಡುತ್ತವೆ. ಕಲ್ಪಿತಕತೆ(Fiction) ಹಾಗೂ ವಸ್ತುಭೂತ ವಿಷಯಗಳು (Non-fiction)ಒಂದು ವಸ್ತುವಿಷಯದ ನಿರೂಪಣೆಯ ವಿವಿಧ ತಂತ್ರಗಳಷ್ಟೆ. ನನಗೇ ಅರಿವಾಗದ ಕಾರಣಗಳಿಗಾಗಿ ಕಲ್ಪಿತಕತೆಗಳು ಸರಾಗವಾಗಿ, ನರ್ತನ ವ್ಯಾಖ್ಯೆಯಲ್ಲಿ ನನ್ನಿಂದ ಹರಿದುಬರುತ್ತದೆ. ಆದರೆ ಅದೇ ವಸ್ತುಭೂತ ವಿಷಯಗಳ ಬರಹ ನನ್ನಲ್ಲಿ ಅತೀವ ವೇದನೆಯುಂಟುಮಾಡುತ್ತದೆ, ಹಿಂಸೆಯುಂಟುಮಾಡುತ್ತದೆ. ಮುಂಜಾನೆಯ ಮಂಪರು ಕಣ್ಣಿಗೆ ಛಿದ್ರ ಜಗತ್ತು ಕಾಣುವಂತೆ ಮಾಡುತ್ತದೆ.

ಬಹುಪಾಲು ನನ್ನ ಬರಹಗಳೆಲ್ಲಾ, ಅದು ಕಲ್ಪಿತಕತೆಗಳಾಗಿರಬಹುದು ಅಥವಾ ವಸ್ತುಭೂತ ವಿಷಯಗಳ ನಿರೂಪಣೆಯಾಗಿರಬಹುದು, ಅವು ಅಧಿಕಾರ ಉಳ್ಳ ಹಾಗೂ ಅಧಿಕಾರವಿಹೀನ ಸ್ಥಿತಿಯ ಸಂಬಂಧಗಳ ಹಾಗೂ ಅವುಗಳ ನಿರಂತರ ತಿಕ್ಕಾಟಗಳ ಬಗೆಗೆ ಆಗಿರುತ್ತದೆ. ಅತ್ಯದ್ಭುತ ಲೇಖಕನಾದ ಜಾನ್ ಬರ್ಗರ್ ಒಮ್ಮೆ ಹೇಳಿದ: 'ಮತ್ತೊಮ್ಮೆ ಎಂದೂ ಒಂದು ವಸ್ತುವಿಷಯ ಅದೊಂದೇ ವಸ್ತುವಿಷಯವೆಂಬಂತೆ ನಿರೂಪಣೆಯಾಗುವುದಿಲ್ಲ.' ಒಂದೇ ವಸ್ತುವಿಷಯವಿರಲು ಸಾಧ್ಯವೇ ಇಲ್ಲ. ಅದನ್ನು ನೋಡುವ ದೃಷ್ಟಿ ಬೇರೆ ಬೇರೆಯಾಗಿರುತ್ತದೆ. ಹಾಗಾಗಿ ನನ್ನ ಯಾವುದೇ ಬರಹದಲ್ಲಿ ನಾನೇ ಆದರ್ಶವಾದಿ. ನನ್ನದೇ ಪರಿಪೂರ್ಣವಾದ ಆದರ್ಶವೆಂಬಂತೆ ಅದನ್ನು ಇತರರ ಮೇಲೆ ಹೇರಲು ಪ್ರಯತ್ನಿಸುವುದಿಲ್ಲ. ಬದಲಿಗೆ ಪ್ರಪಂಚವನ್ನು ನಾನು ನೋಡುವ ದೃಷ್ಟಿಕೋನವನ್ನು ಪರಿಚಯಿಸುವ ಕತೆಗಾರ್ತಿಯಾಗುತ್ತೇನೆ. ನನ್ನ ಬರಹಗಳು, ಅವು ಹೇಗೇ ಕಂಡರೂ ಅವು ರಾಷ್ಟ್ರಗಳ ಅಥವಾ ಅವುಗಳ ಚರಿತ್ರೆಗಳ ಕತೆ ಹೇಳುವುದಿಲ್ಲ. ಆದರೆ ಅವು ಅಧಿಕಾರದ ಕತೆ ಹೇಳುತ್ತವೆ;

ಬುದ್ಧಿಭ್ರಮಣೆಯ ಹಾಗೂ ಅಧಿಕಾರ ಹುಟ್ಟುಹಾಕುವ ಕ್ರೌರ್ಯದ ಕತೆ ಹೇಳುತ್ತವೆ. ಅಧಿಕಾರದ ಭೌತಶಾಸ್ತ್ರದ ಬಗ್ಗೆ ತಿಳಿಸುತ್ತವೆ. ಅನಿರ್ಬಂಧಿತ ಅಧಿಕಾರ ಒಟ್ಟುಗೂಡಿದಂತೆ, ಅದು ಯಾವುದೇ ಸರ್ಕಾರವಾಗಿರಬಹುದು, ರಾಷ್ಟ್ರವಾಗಿರಬಹುದು, ಯಾವುದೇ ಸಂಘಸಂಸ್ಥೆಯಾಗಿರಬಹುದು, ಅಥವಾ ಒಬ್ಬ ವ್ಯಕ್ತಿಯೂ ಆಗಿರಬಹುದು. ಪತಿ, ಪತ್ನಿ ಅಥವಾ ಮಕ್ಕಳಾಗಿರಬಹುದು - ಯಾವುದೇ ಸಿದ್ಧಾಂತಕ್ಕೊಳಗಾಗಿದ್ದರೂ ಸಹ ನಾನು ಈ ಮುಂದೆ ವಿವರಿಸಲಿರುವ ಅತಿರೇಕಗಳಿಗೆ ಹಾಗೂ ದೌರ್ಜನ್ಯಕ್ಕೆ ಎಡೆಮಾಡಿಕೊಡುತ್ತದೆಂಬುದು ನನ್ನ ನಂಬಿಕೆ.

ಭಾರತ ಮತ್ತು ಪಾಕಿಸ್ತಾನದ ಸರ್ಕಾರಗಳು ಆಗಿಂದಾಗ್ಗೆ ಅಣ್ವಸ್ತ್ರ ಯುದ್ಧದ ಬಗ್ಗೆ ಮಾತನಾಡುತ್ತ, ನಾನು ಹಾಗೂ ನನ್ನ ಹಾಗಿನ ಲಕ್ಷಾಂತರ ಜನ ಸದಾ ಅದರ ಅನಾಹುತಗಳ ನೆರಳಿನ ಭೀತಿಯಲ್ಲಿ ಬದುಕುತ್ತಿರುವಂತೆ, ಅದೇ ರೀತಿ, ಅಧ್ಯಕ್ಷ ಬುಶ್‌ರ 'ಎಂದಿಗೂ ಕೊನೆಗೊಳ್ಳದ ಕಾರ್ಯ'ವಾದ 'ಭಯೋತ್ಪಾದಕತೆಯ ವಿರುದ್ಧದ ಸಮರ'ವನ್ನು ನೋಡುತಿರುವ ನಾನು ಪ್ರಜೆಗಳ ಹಾಗೂ ಪ್ರಭುತ್ವದ ನಡುವಿನ ಸಂಬಂಧಗಳ ಬಗೆಗೆ ಬಹಳಷ್ಟು ಯೋಚಿಸುತ್ತಿರುತ್ತೇನೆ.

ಭಾರತದಲ್ಲಿ, ಅಣುಬಾಂಬ್ ವಿರುದ್ಧ, ದೊಡ್ಡ ಅಣೆಕಟ್ಟುಗಳ ವಿರುದ್ಧ, ಕಾರ್ಪೊರೇಟ್ ಜಾಗತೀಕರಣದ ವಿರುದ್ಧ ಹಾಗೂ ಹೆಚ್ಚಾಗುತ್ತಿರುವ ಮತೀಯ ಹಿಂದೂ ಫ್ಯಾಸಿಸಂ ವಿರುದ್ಧ ದನಿ ಎತ್ತಿದ ನಮ್ಮಂತಹ ಕೆಲವರನ್ನು 'ರಾಷ್ಟ್ರ ವಿರೋಧಿಗಳು' ಎಂದು ಕರೆಯುತ್ತಿದ್ದಾರೆ. ಈ ಆರೋಪ ನನ್ನಲ್ಲಿ ಯಾವುದೇ ರೋಷ ಉಂಟು ಮಾಡದಿದ್ದರೂ ನನ್ನ ಕಾರ್ಯ ಹಾಗೂ ಆಲೋಚನೆಗಳನ್ನು ಅದು ಸರಿಯಾಗಿ ವಿವರಿಸಿದಂತಲ್ಲ. ಒಬ್ಬ 'ರಾಷ್ಟ್ರ ವಿರೋಧಿ' ವ್ಯಕ್ತಿಯೆಂದರೆ ಆತ ಅವಳು ತನ್ನದೇ ದೇಶದ ವಿರುದ್ಧವಿರುವ ವ್ಯಕ್ತಿ ಮತ್ತು ಮತ್ತೊಂದರ ಪರವಾಗಿರುವ ವ್ಯಕ್ತಿಯೆಂದು ಪರಿಗಣಿಸಬೇಕಾಗುತ್ತದೆ. ಆದರೆ 'ರಾಷ್ಟ್ರ ವಿರೋಧಿ' ವ್ಯಕ್ತಿ ರಾಷ್ಟ್ರೀಯತೆಯ ಬಗ್ಗೆಯೇ ಸಂಶಯವುಳ್ಳವನು ಹಾಗೂ ರಾಷ್ಟ್ರೀಯತೆಯ ವಿರೋಧಿ ವ್ಯಕ್ತಿಯೇ ಆಗಿರಬೇಕೆಂದೇನೂ ಇಲ್ಲ. ಇಪ್ಪತ್ತನೇ ಶತಮಾನದಲ್ಲಿ ಒಂದಲ್ಲ ಒಂದು ರೀತಿಯ ರಾಷ್ಟ್ರೀಯತೆಯೇ ಬಹುಪಾಲು ಜನಾಂಗಹತ್ಯೆಗಳಿಗೆ ಕಾರಣವಾಗಿದೆ. ಬಾವುಟಗಳು, ಸರ್ಕಾರಗಳು ತಮ್ಮ ಪ್ರಜೆಗಳ ಮನಸ್ಸುಗಳನ್ನು ಸಂಕುಚಿತಗೊಳಿಸಿ ಕಣ್ಣುಕಟ್ಟುವ ಬಟ್ಟೆಯ ಚೂರುಗಳಾಗಿವೆ ಹಾಗೂ ನಂತರದ ಶವಹೊದಿಕೆಗಳಾಗುತ್ತವೆ. ಯಾವಾಗ ಸ್ವತಂತ್ರವಾಗಿ ಆಲೋಚಿಸಬಲ್ಲ ಶಕ್ತಿಯುಳ್ಳ ಜನರು (ಇಲ್ಲಿ ನಾನು ಕಾರ್ಪೊರೇಟ್ ಮಾಧ್ಯಮದವರನ್ನು ಸೇರಿಸುವುದಿಲ್ಲ) ಬಾವುಟಗಳ ನೆರಳಿನಲ್ಲಿ ಮೆರವಣಿಗೆ ಹೊರಡುತ್ತಾರೊ, ಯಾವಾಗ ಲೇಖಕರು, ಚಿತ್ರಗಾರರು, ಸಂಗೀತಗಾರರು, ಚಲನಚಿತ್ರ ನಿರ್ಮಿಸುವವರು ತಮ್ಮ ವಿವೇಚನೆಯನ್ನು ಬದಿಗೊತ್ತಿ ತಮ್ಮ ಕಲೆಯನ್ನು 'ದೇಶ' ಸೇವೆಗೆ ಮುಡಿಪಿಟ್ಟಾಗ ನಮ್ಮಂತಹವರು ಎದ್ದು ಕುಳಿತು ಆಲೋಚಿಸಬೇಕಾಗುತ್ತದೆ. ಭಾರತದಲ್ಲಿ ಅಂತಹ ಘಟನೆಗಳನ್ನು ೧೯೯೮ರ ಅಣು ಪರೀಕ್ಷೆಯ ನಂತರ ಹಾಗೂ ೧೯೯೯ರ ಪಾಕಿಸ್ತಾನದ ವಿರುದ್ಧ ಕಾರ್ಗಿಲ್ ಯುದ್ಧದ ಸಮಯದಲ್ಲಿ ನಾವು ಕಂಡಿದ್ದೇವೆ. ಅಮೆರಿಕದಲ್ಲಿ ಅಂತಹುದನ್ನು ನಾವು ಕೊಲ್ಲಿ ಯುದ್ಧದ ಸಮಯದಲ್ಲಿ ಹಾಗೂ ಈಗ 'ಭಯೋತ್ಪಾದನೆಯ ವಿರುದ್ಧದ ಸಮರ'ದಲ್ಲಿ ಕಾಣುತ್ತಿದ್ದೇವೆ. ಹೆಪ್ಪುಗಟ್ಟಿಸುವ ಚಳಿಯಲ್ಲಿ ಮೇಡ್ ಇನ್ ಚೀನಾದ ಅಮೆರಿಕಾ ಬಾವುಟಗಳು ಪಟಪಟಗುಟ್ಟುತ್ತಿವೆ.

ಇತ್ತೀಚೆಗೆ, ಅಮೆರಿಕಾ ಸರ್ಕಾರದ ಕಾರ್ಯಗಳನ್ನು ಟೀಕಿಸಿದವರನ್ನು (ನನ್ನನ್ನೂ ಒಳ

ಗೊಂಡಂತೆ) 'ಅಮೆರಿಕನ್ ವಿರೋಧಿ' ಗಳೆಂದು ಕರೆಯಲಾಯಿತು. ಈ 'ಅಮೆರಿಕನ್ ವಿರೋಧಿ' ಮನೋಭಾವವೇ ಒಂದು ರೀತಿಯ ಸಿದ್ಧಾಂತವಾಗಿ ರೂಪುಗೊಳ್ಳುತ್ತಿದೆ.

ಅಮೇರಿಕಾ ತನ್ನನ್ನು ಟೀಕಿಸುವವರನ್ನು ಅವಹೇಳನ ಮಾಡಲು 'ಅಮೆರಿಕನ್ ವಿರೋಧಿ' ಎಂದು ಗುರುತಿಸುತ್ತದೆ. ಒಮ್ಮೆಯಾರಿಗಾದರೂ 'ಅಮೆರಿಕನ್ ವಿರೋಧಿ' ಎಂಬ ಹಣೆಪಟ್ಟಿ ಹಚ್ಚಲಾಯಿತೆಂದರೆ, ಅಲ್ಲಿಗೆ ಮುಗಿಯಿತು. ಆತನ ಮಾತನ್ನಾಗಲಿ, ವಾದವಿವಾದಗಳನ್ನಾಗಲಿ ಕೇಳುವಷ್ಟು ತಾಳ್ಮೆ ಅವರಿಗೆ ಇರುವುದಿಲ್ಲ ಹಾಗೂ ಆತನ ಮಾತು ಘಾಸಿಗೊಂಡ ರಾಷ್ಟ್ರೀಯತೆಯ ಬಿರುಗಾಳಿಯಲ್ಲಿ ಕೊಚ್ಚಿಹೋಗುತ್ತದೆ.

ಈ 'ಅಮೆರಿಕನ್ ವಿರೋಧಿ' ಪದದ ಅರ್ಥವೇನು? ನೀವು ಜಾಜ್ ವಿರೋಧಿಯೆಂದೆ? ಅಥವಾ ವಾಕ್ ಸ್ವಾತಂತ್ರ್ಯದ ವಿರೋಧಿಯೆಂದೆ? ನಿಮಗೆ ಟೋನಿ ಮೋರಿಸನ್ ಅಥವಾ ಜಾನ್ ಅಪ್‌ಡೈಕ್ ಇಷ್ಟವಿಲ್ಲವೆಂದೆ? ಅಥವಾ ದೈತ್ಯ ಸೆಕ್ವೊಯಾಸ್ ಜೊತೆ ಜಗಳ ಆಡಿದ್ದೀರೆಂದೆ? ಅಥವಾ 'ಅಮೆರಿಕನ್ ವಿರೋಧಿ' ಎಂದರೆ ಅಣ್ವಸ್ತ್ರಗಳ ವಿರುದ್ಧ ಪ್ರತಿಭಟಿಸಿದ ಹಾಗೂ ವಿಯೆಟ್ನಾಂನಿಂದ ಸೈನ್ಯವನ್ನು ಹಿಂತೆಗೆದುಕೊಳ್ಳಲು ಒತ್ತಾಯಿಸಿದ ಲಕ್ಷಾಂತರ ಅಮೆರಿಕಾದ ನಾಗರೀಕರನ್ನು ನೀವು ಮೆಚ್ಚುವುದಿಲ್ಲವೆಂದೆ? ಅಥವಾ ನೀವು ಎಲ್ಲ ಅಮೆರಿಕನ್ನರನ್ನು ದ್ವೇಷಿಸುತ್ತೀರೆಂದೆ?

ಅಮೆರಿಕಾದ ಸಂಸ್ಕೃತಿ, ಸಂಗೀತ, ಸಾಹಿತ್ಯ, ನಾಡಿನ ಅತ್ಯದ್ಭುತ ಭೂ ಸೌಂದರ್ಯ, ಅಮೆರಿಕಾದ ವಿದೇಶಿ ನೀತಿಯನ್ನು ಟೀಕಿಸುವ ಸಾಮಾನ್ಯ ಜನರ ಸಾಮಾನ್ಯ ಸುಖಭೋಗಗಳು (ಇದಕ್ಕೆ ಅಮೆರಿಕಾದ ಪತ್ರಿಕಾ ಸ್ವಾತಂತ್ರ್ಯವನ್ನು ವಂದಿಸಲೇಬೇಕು. ದುರಂತವೆಂದರೆ ಹೆಚ್ಚಿನ ಅಮೆರಿಕನ್ನರಿಗೆ ಏನೇನೂ ತಿಳಿದಿಲ್ಲ)- ಇವುಗಳೆಲ್ಲದರ ಕಪಟ ಸಂಯೋಜನೆ ಒಂದು ರೀತಿಯ ಉದ್ದೇಶಪೂರ್ವಕ ಕಾರ್ಯತಂತ್ರವಾಗಿದೆ. ಅದು ಒಂದು ರೀತಿಯಲ್ಲಿ ಹಿನ್ನಡೆಯುತ್ತಿರುವ ಸೇನೆ ಜನಭರಿತ ನಗರವೊಂದರಲ್ಲಿ ಆಶ್ರಯ ಪಡೆದಂತೆ- ಶತ್ರುಗಳು ನಾಗರಿಕರಿಗೆ ಗುಂಡು ತಗಲದಂತೆ ಎಚ್ಚರ ವಹಿಸುತ್ತಾರಲ್ಲ ಅದಕ್ಕಾಗಿ.

ಹಲವಾರು ಅಮೆರಿಕನ್ನರು ತಮ್ಮ ಸರ್ಕಾರದ ನೀತಿಗಳೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಲು ಹಿಂಜರಿಯುತ್ತಾರೆ, ಒಂದು ರೀತಿ ತಮಗೇ ಅಪಮಾನವಾಗುತ್ತದೆ ಎನ್ನುವ ರೀತಿಯಲ್ಲಿ. ಅಮೆರಿಕಾ ಸರ್ಕಾರದ ನೀತಿಗಳ ಬೂಟಾಟಿಕೆ ಮತ್ತು ದ್ವಂದ್ವನೀತಿಗಳ ಅತ್ಯಂತ ವಿದ್ವತ್‌ಪೂರ್ಣ, ಕಟುವಾದ, ಪ್ರಖರ ಹಾಗೂ ಲೇವಡಿಯ ಟೀಕಾಕಾರರು ಅಮೆರಿಕದವರೇ ಆಗಿದ್ದಾರೆ. ಅಮೆರಿಕಾ ಸರ್ಕಾರ ಏನು ಕಿತಾಪತಿ ನಡೆಸುತ್ತಿದೆ ಎಂದು ತಿಳಿಯಬೇಕಾಗಿದ್ದಲ್ಲಿ ನಾವು ನೋಮ್ ಚೋಮ್‌ಸ್ಕಿ, ಎಡ್ವರ್ಡ್ ಸೇಡ್, ಹೋವರ್ಡ್ ಜಿನ್, ಎಡ್ ಹರ್ಮನ್, ಅಮಿ ಗುಡ್‌ಮನ್, ಮೈಕೆಲ್ ಆಲ್ಬರ್ಟ್, ಚಾಮರ್ಸ್ ಜಾನ್ಸನ್, ವಿಲಿಯಂ ಬ್ಲಮ್ ಮತ್ತು ಆಂತೋನಿ ಆರ್ನೋವ್‌ರವರ ಮೊರೆಹೋಗುತ್ತೇವೆ.

ಅದೇ ರೀತಿ ಭಾರತದಲ್ಲಿ ನಮ್ಮಂತಹ ನೂರಾರು ಜನವಲ್ಲ ಲಕ್ಷಾಂತರ ಜನ, ಕಾಶ್ಮೀರ ಕಣಿವೆಯಲ್ಲಿ ಭಯೋತ್ಪಾದನೆ ಹತ್ತಿಕ್ಕುವ ನೆಪದಲ್ಲಿ ನಡೆಸುತ್ತಿರುವ ಪ್ರಭುತ್ವ ಅಂಗೀಕಾರದ ಭಯೋತ್ಪಾದನೆ, ಗುಜರಾತಿನ ಮುಸಲ್ಮಾನರ ಪ್ರಭುತ್ವಸಮ್ಮತಿಯ ಜನಾಂಗಹತ್ಯೆಗೆ ಕಣ್ಣುಮುಚ್ಚಿ ಕುಳಿತಿರುವಂತಹ ಭಾರತದ ಫ್ಯಾಸಿಸ್ಟ್ ನೀತಿಗಳಿಗೆ ಪಾಪಪ್ರಜ್ಞೆಯಿಂದ ತಲೆತಗ್ಗಿಸಿದ್ದೇವೆ.

ಹಾಗೆಂದಾಕ್ಷಣ ಭಾರತ ಸರ್ಕಾರವನ್ನು ಟೀಕಿಸುವವರು 'ರಾಷ್ಟ್ರವಿರೋಧಿ'ಗಳಾಗಿಬಿಡುವುದಿಲ್ಲ (ಸರ್ಕಾರವೂ ಅಂತಹವರನ್ನು ರಾಷ್ಟ್ರವಿರೋಧಿಗಳೆಂದು ಪರಿಗಣಿಸಲು ಹಿಂಜರಿಯುವುದಿಲ್ಲ). ಈ ರೀತಿ 'ಭಾರತ' ವೆಂದರೇನು ಅಥವಾ 'ಅಮೆರಿಕಾ' ಎಂದರೇನು ಅಥವಾ ಅವು ಹೇಗಿರಬೇಕೆಂದು ವ್ಯಾಖ್ಯಾನಿಸಲು ಭಾರತ ಸರ್ಕಾರ ಅಥವಾ ಅಮೆರಿಕಾ ಸರ್ಕಾರಕ್ಕೆ ಅಥವಾ ಮತ್ತಾರಿಗೇ ಆಗಲಿ ಬಿಟ್ಟುಕೊಡುವುದು ಅತ್ಯಂತ ಅಪಾಯಕಾರಿಯಾದುದು.

ಯಾರನ್ನಾದರೂ 'ಅಮೆರಿಕಾ ವಿರೋಧಿ' ಎಂದು ಕರೆದಲ್ಲಿ (ಅದೇ ರೀತಿ 'ಭಾರತ ವಿರೋಧಿ' ಅಥವಾ ಮತ್ತಾವುದೇ ದೇಶದ ವಿರೋಧಿ)ಅದು ಜನಾಂಗ ನಿಂದನೆಯಷ್ಟೇ ಅಲ್ಲ, ಕಲ್ಪನೆಯ ಅವನತಿಯೂ ಹೌದು. ವ್ಯವಸ್ಥೆ ತೋರಿಸುತ್ತಿರುವ ಚಿತ್ರಣವೇ ಸರಿಯಾದದ್ದು ಎನ್ನುವುದನ್ನು ಮೀರಿ ದೃಷ್ಟಿ ಹರಿಸದಿದ್ದಲ್ಲಿ, 'ನೀನು ಬುಶ್ ಪರ ಇಲ್ಲವೆಂದಾದಲ್ಲಿ ತಾಲೀಬಾನ್ ಪರ ಇದ್ದೀಯೆ.' 'ನೀನು ನಮ್ಮನ್ನು ಪ್ರೀತಿಸುತ್ತಿಲ್ಲವಲ್ಲವೆ, ಹಾಗಾದರೆ ನಮ್ಮನ್ನು ದ್ವೇಷಿಸುತ್ತಿದ್ದೀಯೆ.' 'ನೀನು ಒಳ್ಳೆಯವನಲ್ಲ, ಹಾಗಿದ್ದಲ್ಲಿ ನೀನು ಖಂಡಿತಾ ಕೆಟ್ಟವನು.' 'ನೀನು ನಮ್ಮ ಪರ ಇಲ್ಲದಿದ್ದಲ್ಲಿ ಖಂಡಿತಾ ಭಯೋತ್ಪಾದಕರ ಪರ ಇದ್ದೀಯೆ' ಎನ್ನುವಂತಾಗುತ್ತದೆ.

ಕಳೆದ ವರ್ಷ, ಬಹುಪಾಲು ಇತರರಂತೆ ನಾನೂ ಸಹ ಸೆಪ್ಟೆಂಬರ್ ೧೧ರ ನಂತರ ಕೇಳಿಬಂದ ಮಾತುಗಳನ್ನು ಅದು ಧಿಮಾಕಿನದು ಹಾಗೂ ಮೂರ್ಖತನದ್ದು ಎಂದು ಹಿಯಾಳಿಸುವ ತಪ್ಪು ಮಾಡಿದ್ದೆ. ಆದರೆ ಅದು ಮೂರ್ಖತನವಲ್ಲ ಎಂಬುದು ನನಗರಿವಾಗಿದೆ. ವಾಸ್ತವವಾಗಿ ಅದು ತಪ್ಪು ಕಲ್ಪನೆಯ, ಒಂದು ಅಪಾಯಕಾರಿ ಯುದ್ಧಕ್ಕೆ ನೇಮಕಾತಿಯ ತಂತ್ರವಾಗಿದೆ. ಅಫಘಾನಿಸ್ತಾನದಲ್ಲಿನ ಯುದ್ಧವನ್ನು ಪ್ರತಿಭಟಿಸುವುದೆಂದರೆ, ತಾಲೀಬಾನ್‌ನನ್ನು ಬೆಂಬಲಿಸಿದಂತೆ ಎಂದು ಎಷ್ಟೊಂದು ಜನ ನಂಬುವುದನ್ನು ಕಂಡು ನಾನು ಅವಾಕ್ಕಾಗಿದ್ದೇನೆ. ಆ ಯುದ್ಧದ ಮೂಲ ಉದ್ದೇಶವೇ (ಒಸಾಮ ಬಿನ್ ಲಾಡೆನ್‌ನನ್ನು ಜೀವಂತ ಅಥವಾ ಶವವಾಗಿ ಹಿಡಿಯುವುದು) ಬದಲಾಗಿದೆ. ಅಲ್ಲಿ ತಾಲಿಬಾನ್ ಸರ್ಕಾರ ಉರುಳಿಸಿ ಅಫ್ಘಾನ್ ಮಹಿಳೆಯರನ್ನು ಬುರ್ಖಾದಿಂದ ಮುಕ್ತಗೊಳಿಸುವುದೇ ಯುದ್ಧದ ಉದ್ದೇಶವೆಂದು ಹೇಳಲಾಗುತ್ತಿದೆ. ಅಮೆರಿಕಾದ ಸೈನಿಕರು ಮಹಿಳಾ ವಿಮೋಚನೆಯ ಯುದ್ಧ ನಡೆಸುತ್ತಿದ್ದಾರೆಂದು ನಾವು ನಂಬುವಂತೆ ಹೇಳುತ್ತಿದ್ದಾರೆ (ಹಾಗಿದ್ದಲ್ಲಿ ಅಮೆರಿಕಾದ ಮಿಲಿಟರಿಯವರು ತಮ್ಮ ಮುಂದಿನ ಮಹಿಳಾ ವಿಮೋಚನೆಯ ಉದ್ದೇಶಕ್ಕಾಗಿ ತಮ್ಮ ಮಿತ್ರ ರಾಷ್ಟ್ರವಾದ ಸೌದಿ ಅರೇಬಿಯಾ ಮೇಲೆ ದಾಳಿಮಾಡುತ್ತಾರೆಯೆ?) ಅದರ ಬಗ್ಗೆ ಈ ರೀತಿಯೂ ಆಲೋಚಿಸಿ: ಭಾರತದಲ್ಲಿ 'ಅಸ್ಪೃಶ್ಯರ' ಮೇಲೆ, ಕ್ರಿಶ್ಚಿಯನ್ ಮತ್ತು ಮುಸಲ್ಮಾನರ ಮೇಲೆ ಹಾಗೂ ಮಹಿಳೆಯರ ಮೇಲೆ ನಿಂದನೀಯ ದೌರ್ಜನ್ಯಗಳು ನಡೆಯುತ್ತಿವೆ. ಪಾಕಿಸ್ತಾನ ಮತ್ತು ಬಾಂಗ್ಲಾದೇಶದಲ್ಲಿ ಅದಕ್ಕಿಂತ ಹೀನಾಯವಾಗಿ ಅಲ್ಪಸಂಖ್ಯಾತರನ್ನು ಹಾಗೂ ಮಹಿಳೆಯರನ್ನು ನಡೆಸಿಕೊಳ್ಳಲಾಗುತ್ತಿದೆ. ಅದಕ್ಕಾಗಿ ದೆಹಲಿ, ಇಸ್ಲಾಮಾಬಾದ್ ಮತ್ತು ಢಾಕಾಗಳನ್ನು ಬಾಂಬ್‌ಗಳಿಂದ ನಾಶಮಾಡಬೇಕೆ? ಭಾರತದಲ್ಲಿನ ಧರ್ಮಾಂಧತೆಯನ್ನು ಬಾಂಬ್‌ಗಳಿಂದ ನಾಶಮಾಡಲು ಸಾಧ್ಯವೇ? ಬಾಂಬ್‌ಗಳಿಂದ ಮಹಿಳಾ ವಿಮೋಚನಾ ಸಾಧ್ಯವೆ? ಅಮೆರಿಕಾದ ಮಹಿಳೆಯರು ಮತಾಧಿಕಾರ ಪಡೆದದ್ದು ಇದೇ ರೀತಿಯೆ? ಗುಲಾಮಗಿರಿ ಕೊನೆಯಾದದ್ದು ಹೀಗೆಯೆ? ಸ್ಯಾಂಟಾಫೆಯನ್ನು ಬಾಂಬ್‌ಗಳಿಂದ

ನಾಶಪಡಿಸಿ, ಲಕ್ಷಾಂತರ ಮೂಲನಿವಾಸಿ ಅಮೆರಿಕನ್ನರ ಹತ್ಯೆಗೈದು ಅವರ ಶವಗಳ ಮೇಲೆ ಅಮೆರಿಕ ಸಂಯುಕ್ತ ಸಂಸ್ಥಾನವನ್ನು ನಿರ್ಮಿಸಲಾಗಿದೆ. ಆ ಮೂಲನಿವಾಸಿಗಳಿಗೆ ನ್ಯಾಯ ದೊರಕಿಸಲು ಸಾಧ್ಯವೆ?

ನಾವು ಮರೆಯಲಾಗದುದನ್ನು ನೆನಪಿಸಲು ನಮಗೆ ವಾರ್ಷಿಕೋತ್ಸವಗಳ ಅವಶ್ಯಕತೆಯಿಲ್ಲ. ಭಯಾನಕ ಸ್ಮರಣೆಗಳ ವಾರ್ಷಿಕೋತ್ಸವಗಳ ಈ ಸೆಪ್ಟೆಂಬರ್ ತಿಂಗಳಿನಲ್ಲಿ ನಾನು ಅಮೆರಿಕದಲ್ಲಿರುವುದು ಆಕಸ್ಮಿಕವಷ್ಟೆ. ಇಲ್ಲಿ ಅಮೆರಿಕದಲ್ಲಿ ಪ್ರತಿಯೊಬ್ಬರ ಮನಸ್ಸಿನಲ್ಲೂ ೯/೧೧ ಭಯಾನಕ ನೆನಪು ಕಾಡುತ್ತಿದೆ. ಈ ಭಯೋತ್ಪಾದಕ ಕೃತ್ಯದಲ್ಲಿ ಸುಮಾರು ಮೂರು ಸಾವಿರ ನಾಗರಿಕರು ಮೃತಪಟ್ಟಿದ್ದಾರೆ. ನೋವಿನ ಯಾತನೆ ಇನ್ನೂ ಗಾಢವಾಗಿದೆ, ರೋಷದ ಕಿಚ್ಚು ಆರಿಲ್ಲ. ಕಣ್ಣೀರು ಒಣಗಿಲ್ಲ. ಭಯಾನಕ ಯುದ್ಧದ ವಿಚಿತ್ರ ಕಮಟು ವಾಸನೆ ಇಡೀ ಪ್ರಪಂಚವನ್ನು ಆವರಿಸಿದೆ. ಆದರೂ, ತಮ್ಮ ಬಂಧುಬಳಗದವರನ್ನು ಹಾಗೂ ಆತ್ಮೀಯರನ್ನು ಕಳೆದುಕೊಂಡ ಪ್ರತಿಯೊಬ್ಬರಿಗೂ ಗೊತ್ತಿದೆ, ಯಾವುದೇ ಯುದ್ಧವಾಗಲಿ, ಪ್ರತೀಕಾರವಾಗಲಿ ಅಗಲಿದ ತಮ್ಮವರನ್ನು ವಾಪಸ್ಸು ತಂದುಕೊಡುವುದಿಲ್ಲ ಹಾಗೂ ತಮ್ಮ ನೋವನ್ನು ಕಡಿಮೆಮಾಡುವುದಿಲ್ಲ ಎಂದು. ಯುದ್ಧ ಸತ್ತವರ ಪ್ರತೀಕಾರಕ್ಕೆ ಉತ್ತರವಾಗುವುದಿಲ್ಲ. ಯುದ್ಧ ಅವರ ಸ್ಮರಣೆಯನ್ನು ಅಪವಿತ್ರಗೊಳಿಸುತ್ತದೆ.

ಈಗ ಮತ್ತೊಂದು ಯುದ್ಧಕ್ಕೆ - ಇರಾಕ್ ವಿರುದ್ಧ ಕಿಡಿ ಹಚ್ಚಲು ಜನರ ದುಃಖ,ವ್ಯಥೆಯನ್ನು ಬಳಸಿ, ಸೋಪು, ಬೂಟು ಮಾರುವ ಕಂಪೆನಿಗಳ ಸಹಾಯದಿಂದ ಟಿ.ವಿ.ಗಾಗಿ ವಿಶೇಷ ಪ್ರಾಯೋಜಿತ ಕಾರ್ಯಕ್ರಮಗಳನ್ನು ತಯಾರಿಸಿ ಚಿತ್ತರಿಸುವುದು ಅವರ ನೋವನ್ನು ಅಪಮೌಲ್ಯಗೊಳಿಸಿದಂತಾಗಿದೆ ಹಾಗೂ ಅದರ ಅರ್ಥವನ್ನೇ ತಿರುಚಿದಂತಾಗಿದೆ. ಈಗ ನಾವು ನೋಡುತ್ತಿರುವುದು ಶೋಕದ ವಾಣಿಜ್ಯೀಕರಣದ ಅಸಭ್ಯ ಪ್ರದರ್ಶನ. ಶೋಕವನ್ನು ವ್ಯಾಪಾರ ವಹಿವಾಟಾಗಿಸಿ, ಮನುಷ್ಯನ ಅತ್ಯಂತ ಖಾಸಗಿ ವೇದನೆಯನ್ನೂ ಸಹ ಬಟಾಬಯಲಾಗಿಸಿ ರಾಜಕೀಯಕ್ಕಾಗಿ ಬಳಸಿಕೊಳ್ಳುತ್ತಿರುವುದು ಪ್ರಭುತ್ವವೊಂದು ತನ್ನ ಜನರ ಮೇಲೆ ಎಸಗಬಹುದಾದ ಅತ್ಯಂತ ಹೇಯ ಅಪರಾಧ.

ಈ ರೀತಿಯ ಸಾರ್ವಜನಿಕ ವೇದಿಕೆಯಿಂದ ಮಾತನಾಡಬಹುದಾದ ವಿಷಯವಲ್ಲ ಇದು. ಆದರೆ ನಾನು ಮಾತನಾಡಲು ಇಷ್ಟಪಡುವುದು ಕಳೆದುಕೊಂಡಿರುವುದರ ಬಗ್ಗೆ ಹಾಗೂ ಕಳೆದುಕೊಳ್ಳುತ್ತಿರುವುದರ ಬಗ್ಗೆ; ವ್ಯಥೆ, ನೋವು, ಹತಾಶೆ, ದಿವಾಳಿತನ, ಅನಿಶ್ಚಿತತೆ, ಹೆದರಿಕೆ, ಸಂವೇದನೆಗಳು ಮತ್ತು ಕನಸುಗಳು ಸಾಯುತ್ತಿರುವುದರ ಬಗ್ಗೆ. ಈ ಜಗತ್ತು ನಿರಂತರವಾಗಿ ಮಾಡುತ್ತಿರುವ ಅನ್ಯಾಯದ ಬಗ್ಗೆ. ವ್ಯಕ್ತಿಗಳಿಗೆ ಕಳೆದುಕೊಳ್ಳುತ್ತಿರುವುದು ಎಂದರೇನು? ಜನರ ನಿತ್ಯಸಂಗಾತಿಯಾದ ಸಂಸ್ಕೃತಿಗೆ ಈ ಹತಾಶೆ, ಕಳೆದುಕೊಳ್ಳುವುದು ಯಾವ ಅರ್ಥಕೊಡುತ್ತದೆ?

ನಾವು ಮಾತನಾಡುತ್ತಿರುವುದು ಸೆಪ್ಟೆಂಬರ್ ೧೧ರ ಬಗ್ಗೆಯಾಗಿರುವುದರಿಂದ ಆ ದಿನ ಅಲ್ಲಿ ಜೀವ ಕಳಕೊಂಡವರ ಬಂಧುಗಳಿಗೆ ಮಾತ್ರವಲ್ಲ; ಜಗತ್ತಿನ ಇತರರಿಗೂ ಆ ದಿನದ ಪ್ರಾಮುಖ್ಯತೆ ಬಹಳಷ್ಟಿದೆ. ಚರಿತ್ರೆಯ ಈ ಉತ್ಖನನ ಯಾವುದೇ ದೋಷಾರೋಪಣೆಯಲ್ಲ ಅಥವಾ ಯಾವುದೇ ಪ್ರಚೋದನೆಯಲ್ಲ, ಬದಲಿಗೆ ಇದು ಚರಿತ್ರೆಯ ಅತ್ಯಂತ ನೋವಿನ ಕ್ಷಣವನ್ನು ಹಂಚಿಕೊಳ್ಳುವುದಾಗಿದೆ. ಮುಸುಕಿದ ಮಂಜನ್ನು ಬೆಚ್ಚನೆ ಸೂರ್ಯಶಾಖದಿಂದ ತಿಳಿಗೊಳಿಸಬೇಕಾಗಿದೆ. ಅಮೆರಿಕಾದ ನಾಗರಿಕರಿಗೆ ಅತ್ಯಂತ ಮೃದುವಾಗಿ, ಅತ್ಯಂತ ಮಾನವೀಯ ಧ್ವನಿಯಲ್ಲಿ ಹೇಳಬೇಕಾಗಿದೆ: 'ಪ್ರಪಂಚಕ್ಕೆ ನಿಮಗಿದೋ ಸ್ವಾಗತ.'

ಇಪ್ಪತ್ತೊಂಬತ್ತು ವರ್ಷಗಳ ಹಿಂದೆ ಚಿಲಿಯಲ್ಲಿ ೧೯೭೩ರ ಸೆಪ್ಟೆಂಬರ್ ೧೧ರಂದು ಸಿ.ಐ.ಎ. ಬೆಂಬಲಿತ ಜನರಲ್ ಪಿನೋಶೆ ಪ್ರಜಾಸತ್ತಾತ್ಮಕವಾಗಿ ಚುನಾಯಿತವಾಗಿದ್ದ ಸಾಲ್ವಡಾರ್ ಅಲೆಂಡೆಯ ಸರ್ಕಾರವನ್ನು ಅತ್ಯಂತ ನಾಟಕೀಯವಾಗಿ ಉರುಳಿಸಿದ. ಅಮೆರಿಕಾದ ಆಗಿನ ರಾಜ್ಯ ಕಾರ್ಯದರ್ಶಿಯಾಗಿದ್ದ ನೋಬೆಲ್ ಶಾಂತಿ ಪ್ರಶಸ್ತಿ ವಿಜೇತ ಹೆನ್ರಿ ಕಿಸಿಂಜರ್ 'ಚಿಲಿಯ ಜನ ಹೊಣಗಾರಿಕೆ ಇಲ್ಲದವರು ಎಂದಾಕ್ಷಣ ಆ ದೇಶವನ್ನು ಮಾರ್ಕ್ಸಿಸ್ಟ್ ಆಗಲು ಬಿಡಬಾರದು' ಎಂದು ಹೇಳಿದ್ದರು.

ಆಕ್ರಮಣದ ನಂತರ ಅಧ್ಯಕ್ಷ ತಮ್ಮ ರಾಷ್ಟ್ರಾಧ್ಯಕ್ಷರ ಅರಮನೆಯಲ್ಲಿ ಸತ್ತುಬಿದ್ದಿದ್ದರು. ಅದು ಕೊಲೆಯೋ ಅಥವಾ ಆತ್ಮಹತ್ಯೆಯೋ ಎಂಬುದು ಬಹುಶಃ ಎಂದಿಗೂ ತಿಳಿಯುವುದಿಲ್ಲ. ನಂತರದ ಕ್ರೌರ್ಯ, ದಬ್ಬಾಳಿಕೆಯ ರಾಜ್ಯಾಡಳಿತದಲ್ಲಿ ಸಾವಿರಾರು ಜನ ಕೊಲ್ಲಲ್ಪಟ್ಟರು. ಸಾವಿರಾರು ಜನ 'ಮಾಯವಾದರು'. ಫೈರಿಂಗ್ ಸ್ಕ್ವಾಡ್‌ಗಳು ಸಾರ್ವಜನಿಕ ಸ್ಥಳಗಳಲ್ಲಿ ನರಮೇಧ ನಡೆಸಿದವು. ಕಾನ್ಸನ್‌ಟ್ರೇಷನ್ ಕ್ಯಾಂಪ್‌ಗಳು ಮತ್ತು ಚಿತ್ರಹಿಂಸಾ ಕೊಠಡಿಗಳನ್ನು ದೇಶದಲ್ಲೆಲ್ಲಾ ತೆರೆಯಲಾಯಿತು. ಸತ್ತವರನ್ನು ಗಣಿಗಳಲ್ಲಿ, ಗುರುತಿಸಲಾಗದ ಸಮಾಧಿಗಳಲ್ಲಿ ಹೂಳಲಾಯಿತು. ಹದಿನೇಳು ವರ್ಷಗಳ ಕಾಲ ಚಿಲಿಯ ಜನ ಅತ್ಯಂತ ಯಾತನೆಯ ಹಾಗೂ ನೋವಿನ ಬದುಕು ನಡೆಸಿದರು. ಸ್ಯಾಂಟಿಯಾಗೋ ಕ್ರೀಡಾಂಗಣದಲ್ಲಿ ಜನರ ಮುಂದೆ ಸಂಗೀತಗಾರ ವಿಕ್ಟರ್ ಜಾರಾನ ಕೈಗಳನ್ನು ಪಿನೋಶೆಯ ಸೈನಿಕರು ಹೇಗೆ ಕತ್ತರಿಸಿದರೆಂಬುದನ್ನು ಚಿಲಿಯ ಜನ ಈಗಲೂ ಹೇಳುತ್ತಾರೆ. ಗುಂಡಿಟ್ಟು ಕೊಲ್ಲುವ ಮುನ್ನ ಅವರು ಕೈ ಇಲ್ಲದ ವಿಕ್ಟರ್‌ನಿಗೆ ಗಿಟಾರ್ ಕೊಟ್ಟು ನುಡಿಸುವಂತೆ ಹೇಳಿ ಲೇವಡಿ ಮಾಡಿದರಂತೆ.

೧೯೯೮ರಲ್ಲಿ ಬ್ರಿಟನ್‌ನಲ್ಲಿ ಜನರಲ್ ಪಿನೋಶೆಯನ್ನು ಅರೆಸ್ಟ್ ಮಾಡಿದನಂತರ ಅಮೆರಿಕಾ ಸರ್ಕಾರವು ಸಾವಿರಾರು ರಹಸ್ಯ ದಾಖಲೆಗಳನ್ನು ಮುಚ್ಚಿಹಾಕಿತು. ಅದರಲ್ಲಿ ಪಿನೋಶೆಯನ್ನು ಅಧಿಕಾರಕ್ಕೆ ತರುವಲ್ಲಿ ಇದ್ದ ಸಿ.ಐ.ಎ. ಪಾತ್ರ ಸ್ಫುಟವಾಗಿತ್ತು ಹಾಗೂ ಪಿನೋಶೆಯ ಅಧಿಕಾರದ ಸಮಯದಲ್ಲಿ ಅಮೆರಿಕಾ ಸರ್ಕಾರಕ್ಕೆ ಚಿಲಿಯಲ್ಲಿನ ದಿಗ್ಭ್ರಮೆಗೊಳಿಸುವ ಆಗುಹೋಗುಗಳ ಬಗೆಗಿನ ಪ್ರತಿಯೊಂದು ವಿವರದ ದಾಖಲೆಯೂ ಇತ್ತು. ಆಗಲೂ ಕಿಸಿಂಜರ್ ಪಿನೋಶೆಗೆ ತನ್ನ ಬೆಂಬಲ ಸೂಚಿಸಿ, "ನಿನ್ನ ಕಾರ್ಯಗಳಿಗೆ ಅಮೆರಿಕಾದ ಸಾಂತ್ವನ ಹಾಗೂ ಬೆಂಬಲ ಇದ್ದೇ ಇದೆ. ನಿನ್ನ ಸರ್ಕಾರಕ್ಕೆ ಒಳ್ಳೆಯದಾಗಲಿ' ಎಂದು ಹೇಳಿದರು.

ಸದಾ ಪ್ರಜಾಪ್ರಭುತ್ವದಲ್ಲಿ ಬದುಕಿರುವ ನಮಗೆ (ಅದರಲ್ಲಿ ಎಷ್ಟೇ ನ್ಯೂನತೆಗಳಿದ್ದರೂ) ಸರ್ವಾಧಿಕಾರದ ದಬ್ಬಾಳಿಕೆಯಲ್ಲಿ ಸಂಪೂರ್ಣ ಸ್ವಾತಂತ್ರ್ಯ ಕಳೆದುಕೊಳ್ಳುವುದರ ಹಿಂಸೆ, ಯಾತನೆಯನ್ನು ಊಹಿಸಿಕೊಳ್ಳಲೂ ಸಾಧ್ಯವಿಲ್ಲ. ಇಲ್ಲಿ ಪಿನೋಶೆಯ ಕೊಲೆಗಡುಕತನಕ್ಕೆ ಬಲಿಯಾದವರ ಲೆಕ್ಕ ಮಾತ್ರ ಮುಖ್ಯವಲ್ಲ, ಸ್ವತಂತ್ರ ಬದುಕು ಕಳೆದುಕೊಂಡು ಜೀವಂತ ಇರುವವರ ಸಂಖ್ಯೆಯೂ ಇಲ್ಲಿ ಮುಖ್ಯವಾಗುತ್ತದೆ.

ದುರಾದೃಷ್ಟವೆಂದರೆ, ಅಮೆರಿಕಾ ಸರ್ಕಾರದ ಕಣ್ಣಿಗೆ ಬಿದ್ದದ್ದು ಚಿಲಿ ದೇಶ ಮಾತ್ರವಲ್ಲ. ದಕ್ಷಿಣ ಅಮೆರಿಕಾದ ಗ್ವಾಟೆಮಾಲ, ಕೋಸ್ಟರಿಕಾ, ಈಕ್ವೆಡಾರ್, ಬ್ರೆಜಿಲ್, ಪೆರು, ಡೋಮೆನಿಕನ್ ರಿಪಬ್ಲಿಕ್, ಮೆಕ್ಸಿಕೊ ಮತ್ತು ಕೊಲಂಬಿಯಾ ದೇಶಗಳೂ ಸಹ ಸಿ.ಐ.ಎ. ಕಳ್ಳಾಟಗಳಿಗೆ ಮೈದಾನಗಳಾಗಿವೆ. ಈ ದೇಶಗಳಲ್ಲಿ ತಾನು ಬೆಂಬಲಿಸಿ, ಸ್ಥಾಪಿಸಿದ ನಿರಂಕುಶ ಸರ್ವಾಧಿಕಾರಿಗಳಿಂದ,

ಮಾದಕ ವಸ್ತು ಮಾಫಿಯಾದವರಿಂದ, ಮದ್ದುಗುಂಡು ದಂಧೆಯವರಿಂದ ಲಕ್ಷಾಂತರ ಲ್ಯಾಟಿನ್ ಅಮೆರಿಕನ್ ನಾಗರಿಕರು ಚಿತ್ರಹಿಂಸೆಗೊಳಗಾಗಿದ್ದಾರೆ, ಹತ್ಯೆಗೊಳಗಾಗಿದ್ದಾರೆ ಇಲ್ಲವೇ 'ಮಾಯವಾಗಿದ್ದಾರೆ'! (ಈ ಬಹಳಷ್ಟು ಅಮೆರಿಕಾದ 'ಜನರು' ಜಾರ್ಜಿಯಾದ ಫೋರ್ಟ್ ಬೆನ್ನಿಂಗ್‌ನಲ್ಲಿನ ಅಮೆರಿಕಾ ಸರ್ಕಾರದ ಧನಸಹಾಯದ ಕುಖ್ಯಾತ 'ಸ್ಕೂಲ್ ಆಫ್ ಅಮೆರಿಕಾಸ್'ನಲ್ಲಿ ಓದಿದವರಾಗಿದ್ದಾರೆ.) ಇಷ್ಟೆಲ್ಲಾ ನೋವು, ಅಪಮಾನದ ಜೊತೆಗೆ ದಕ್ಷಿಣ ಅಮೆರಿಕಾದ ಜನರಿಗೆ ಪ್ರಜಾಸತ್ತಾತ್ಮಕ ಸರ್ಕಾರ ರಚಿಸಲು, ಆಡಳಿತ ನಡೆಸಲು ಸಾಧ್ಯವೇ ಇಲ್ಲ ಹಾಗೂ ಕ್ಷಿಪ್ರ ಕ್ರಾಂತಿ, ಆಡಳಿತಾಕ್ರಮಣ, ಕೊಲೆಗಡುಕತನ ಅವರ ರಕ್ತದಲ್ಲೇ ಇದೆಯೆಂದು ಅಮೆರಿಕಾ ಪ್ರಚಾರ ನಡೆಸುತ್ತಿದೆ!

ಈ ಪಟ್ಟಿಯಲ್ಲಿ ಅಮೆರಿಕಾ ಸೈನ್ಯ ರಕ್ತಪಾತ ನಡೆಸಿದ ಆಫ್ರಿಕಾ, ಏಷ್ಯಾದ ವಿಯೆಟ್ನಾಂ ಕೊರಿಯಾ, ಇಂಡೋನೇಷಿಯ, ಲಾವೋಸ್ ಮತ್ತು ಕಾಂಬೋಡಿಯಾದಂತಹ ದೇಶಗಳು ಸೇರಿಲ್ಲ. ದಶದಶಕಗಳ ಎಷ್ಟು ಸೆಪ್ಟೆಂಬರ್ ತಿಂಗಳುಗಳಲ್ಲಿ ಲಕ್ಷಾಂತರ ಏಷಿಯನ್ನರನ್ನು ಬಾಂಬ್ ಹಾಕಿ, ಕೊಚ್ಚಿಹಾಕಿ, ಸುಟ್ಟುಹಾಕಿ ಕೊಂದಿಲ್ಲ? ೧೯೪೫ರ ಆಗಸ್ಟ್‌ನಲ್ಲಿ ಜಪಾನಿನ ಹಿರೋಷಿಮಾ ಮತ್ತು ನಾಗಸಾಕಿಯ ಮೇಲೆ ಬಾಂಬ್ ಹಾಕಿ ಸಾವಿರಾರು ಜನರನ್ನು ಕೊಂದನಂತರ ಎಷ್ಟು ಸೆಪ್ಟೆಂಬರ್‌ಗಳು ಕಳೆದುಹೋಗಿಲ್ಲ? ನಂತರ ಎಷ್ಟು ಸೆಪ್ಟೆಂಬರ್‌ಗಳು ಅಲ್ಲಿ ಬದುಕುಳಿದ ಜನ, ಅವರ ಮಕ್ಕಳು, ಅವರ ಮಕ್ಕಳ ಮಕ್ಕಳು, ಬೀಸುವ ಗಾಳಿಯಲ್ಲಿನ, ಹರಿಯುವ ನೀರಿನಲ್ಲಿನ ಹಾಗೂ ನೆಲದ ಮೇಲಿನ ಪ್ರತಿಯೊಂದು ಜೀವಿಯೂ ನರಕಯಾತನೆಯಿಂದ ನರಳಿಲ್ಲ? ಅಲ್ಲಿಂದ ಹೆಚ್ಚೇನೂ ದೂರವಲ್ಲದ ಆಲ್‌ಬುಕರಕ್‌ನಲ್ಲಿ ರಾಷ್ಟ್ರೀಯ ಅಣು ವಸ್ತುಸಂಗ್ರಹಾಲಯವಿದೆ. ಅಲ್ಲಿ 'ಫ್ಯಾಟ್ ಮ್ಯಾನ್'ಮತ್ತು 'ಲಿಟ್ಲ್ ಬಾಯ್'ನ (ಇವು ಹಿರೋಷಿಮಾ ಮತ್ತು ನಾಗಸಾಕಿಯ ಮೇಲೆ ಅಮೆರಿಕಾ ಹಾಕಿದ ಬಾಂಬ್‌ಗಳ ಪ್ರೀತಿಯ ಹೆಸರುಗಳು) ಕಿವಿಯೋಲೆಗಳನ್ನು ನೆನಪಿಗಾಗಿ ಮಾರುತ್ತಾರೆ. ಅವು ಕಿವಿಗಳಲ್ಲಿ ಅಲುಗಾಡುವಾಗ ಸಾವಿನ ಗಂಟೆ ಮೊಳಗಿದಂತಿರುತ್ತದೆ. ತಲೆಕೆಟ್ಟ ಜನ ಅವುಗಳನ್ನು ಧರಿಸುತ್ತಾರೆ! ವಿಷಯ ಎಲ್ಲೆಲ್ಲೋ ಹೋಗುತ್ತಿದೆ. ನಾನು ಮಾತನಾಡುತ್ತಿರುವುದು ಸೆಪ್ಟೆಂಬರ್ ಬಗ್ಗೆ, ಅಗಸ್ಟ್ ಬಗ್ಗೆಯಲ್ಲ.

ಸೆಪ್ಟೆಂಬರ್ ೧೧, ಮಧ್ಯಪ್ರಾಚ್ಯ (ಪಶ್ಚಿಮ ಏಷಿಯಾ)ದಲ್ಲೂ ದುರಂತದ ಕತೆ ಹೇಳುತ್ತದೆ. ೧೯೨೨ರ ಸೆಪ್ಟೆಂಬರ್ ೧೧ರಂದೇ ಅರಬ್ಬರ ರೋಷ, ಪ್ರತಿಭಟನೆಯನ್ನು ಲೆಕ್ಕಿಸದೆ ಗಾಜಾ ನಗರದ ಬಾಗಿಲ ಬಳಿ ಸೈನ್ಯ ನಿಲ್ಲಿಸಿ ಬ್ರಿಟಿಷ್ ಸರ್ಕಾರ ಪ್ಯಾಲೆಸ್ಟೈನ್‌ನ ಅಧ್ಯಾದೇಶ ಪಡೆದದ್ದು. ಇದು ಸಾಮ್ರಾಜ್ಯಶಾಹಿ ಬ್ರಿಟಿಷ್ ಸರ್ಕಾರದ ೧೯೧೭ರ ಬಾಲ್ಫೋರ್ ಡಿಕ್ಲರೇಶನ್‌ನ ಅನುಸರಣ ಕಾರ್ಯವಾಗಿತ್ತು. ಈ ಡಿಕ್ಲರೇಶನ್ ಯುರೋಪಿನ ಯಹೂದಿಗಳಿಗೆ ತಮ್ಮದೇ ಆದ ಒಂದು ಸ್ವಂತ ದೇಶವನ್ನು ನೀಡುವ ಆಶ್ವಾಸನೆ ನೀಡಿತ್ತು (ಬೇಕಾದವರಿಗೆ ದೇಶಗಳನ್ನು ಹಂಚುವ 'ಸೂರ್ಯ ಎಂದೂ ಮುಳುಗದ' ಬ್ರಿಟಿಷ್ ಸಾಮ್ರಾಜ್ಯಶಾಹಿಯ ಧೋರಣೆ ಆಗ ಹೇಗಿತ್ತೆಂದರೆ ಪೋಕರಿ ಶಾಲಾಬಾಲಕ ಮೃದು ಸ್ವಭಾವದ ಬಾಲಕರ ಗೋಲಿಗಳನ್ನು ಕಿತ್ತು ಇತರರಿಗೆ ಹಂಚುವ ಹಾಗಿತ್ತು) ಡಿಕ್ಲರೇಶನ್ ಆದ ಎರಡು ವರ್ಷಗಳ ನಂತರ ಆಗಿನ ಬ್ರಿಟಿಷ್ ವಿದೇಶಾಂಗ ಸಚಿವರಾಗಿದ್ದ ಲಾರ್ಡ್ ಬಾಲ್ಫೋರ್ ಹೀಗೆ ಹೇಳಿದರು: ಪ್ಯಾಲೆಸ್ಟೈನ್ ವಿಷಯದಲ್ಲಿ ನಾವು ಆ ದೇಶದ ಮೂಲನಿವಾಸಿಗಳ ಆಶಯಗಳನ್ನು ಕೇಳುತ್ತಾ ಹೋಗುವುದಿಲ್ಲ. ಯಹೂದಿ ಧರ್ಮ, ಅದು

ಸರಿಯೋ ತಪ್ಪೋ, ಒಳ್ಳೆಯದೋ ಅಥವಾ ಕೆಟ್ಟದ್ದೋ- ಅವರ ಮೂಲ ಶತಶತಮಾನಗಳ ಸಂಪ್ರದಾಯದಲ್ಲಿದೆ. ಇಂದಿನ ಅವಶ್ಯಕತೆಗಳಲ್ಲಿದೆ ಹಾಗೂ ಈ ಪ್ರಾಚೀನ ನಾಡಿನ ಈಗಿನ ನಿವಾಸಿಗಳಾದ ಏಳು ಲಕ್ಷ ಅರಬ್ಬರ ಆಶಯಗಳನ್ನು ಪೂರ್ವಾಗ್ರಹಗಳನ್ನು ಮೀರಿದ ಭವಿಷ್ಯದ ಅತ್ಯಂತ ಬಹುಮುಖ್ಯ ಭರವಸೆಗಳಲ್ಲಿದೆ.'

ಯಾರ ಆಶಯಗಳು ಹಾಗೂ ಅವಶ್ಯಕತೆಗಳು ಬಹುಮುಖ್ಯವಾದುವು ಎಂಬುದನ್ನು ಸಾಮ್ರಾಜ್ಯಶಾಹಿ ಆಡಳಿತ ಎಷ್ಟು ಸುಲಭವಾಗಿ , ಬೇಜವಾಬ್ದಾರಿಯುತವಾಗಿ ನಿರ್ಧರಿಸಿತು! ಎಷ್ಟು ಬೇಜವಾಬ್ದಾರಿಯುತವಾಗಿ ಪ್ರಾಚೀನ ನಾಗರೀಕತೆಗಳನ್ನು ವಿಮರ್ಶಿಸಿತು! ಪ್ಯಾಲೆಸ್ಟೈನ್ ಮತ್ತು ಕಾಶ್ಮೀರಗಳು ಆಧುನಿಕ ಪ್ರಪಂಚಕ್ಕೆ ಸಾಮ್ರಾಜ್ಯಶಾಹಿ ಬ್ರಿಟನ್ನಿನ ರಕ್ತಸಿಕ್ತ, ವ್ರಣಭರಿತ ಕೊಡುಗೆಗಳು.

೧೯೩೭ರಲ್ಲಿ ಪ್ಯಾಲೆಸ್ಟೈನರ ಬಗ್ಗೆ ವಿನ್‌ಸ್ಟನ್ ಚರ್ಚಿಲ್ ಹೇಳಿದ್ದರು: 'ಕೊಟ್ಟಿಗೆಯಲ್ಲಿನ ನಾಯಿ, ಬಹಳ ದಿನಗಳಿಂದ ಅದು ಅಲ್ಲೇ ವಾಸವಾಗಿದ್ದರೂ ಸಹ, ಆ ಕೊಟ್ಟಿಗೆಯ ಅಂತಿಮ ಹಕ್ಕು ಆ ನಾಯಿಗೇ ಸೇರಿದ್ದು ಎನ್ನುವ ವಾದವನ್ನು ನಾನು ಒಪ್ಪುವುದಿಲ್ಲ. ಆ ಹಕ್ಕಿಗೆ ನಾನು ಮಾನ್ಯತೆ ನೀಡುವುದೇ ಇಲ್ಲ. ಅಮೆರಿಕಾದ ರೆಡ್ ಇಂಡಿಯನ್ನರಿಗೆ ಹಾಗೂ ಆಸ್ಟ್ರೇಲಿಯಾದ ಕಪ್ಪು ಜನರಿಗೆ ಅನ್ಯಾಯವಾಗಿದೆ ಎನ್ನುವುದೂ ಸರಿಯಲ್ಲ. ಒಂದು ಬಲಶಾಲಿ ಮಾನವ ಜನಾಂಗ,ಒಂದು ಉತ್ತಮ ದರ್ಜೆಮಾನವ ಜನಾಂಗ ಅಥವಾ ಹೇಳಬೇಕೆಂದರೆ ಹೆಚ್ಚು ಪ್ರಾಪಂಚಿಕ ವಿವೇಕದ ಮಾನವ ಜನಾಂಗ ಬಂದು ಅವರ ಸ್ಥಾನವನ್ನು ಆಕ್ರಮಿಸಿರುವುದರಿಂದ ಮೂಲನಿವಾಸಿಗಳಿಗೆ ಅನ್ಯಾಯವಾಗಿದೆಯೆನ್ನುವುದನ್ನು ನಾನು ಒಪ್ಪಲು ತಯಾರಿಲ್ಲ.' ಈ ರೀತಿಯ ಮನೋಭಾವವೇ ಪ್ಯಾಲೆಸ್ಟೈನರ ಬಗೆಗಿನ ಇಸ್ರೇಲ್ ಸರ್ಕಾರದ ಧೋರಣೆಗೆ ಕಾರಣವಾಯ್ತು. ೧೯೬೯ರಲ್ಲಿ ಇಸ್ರೇಲಿನ ಆಗಿನ ಪ್ರಧಾನ ಮಂತ್ರಿ ಗೋಲ್ಡಾ ಮಿಯರ್ 'ಪ್ಯಾಲೆಸ್ಟೈನರು ಅಸ್ತಿತ್ವದಲ್ಲೇ ಇಲ್ಲ' ಎಂದಿದ್ದರು. ಆಕೆಯ ನಂತರದ ಪ್ರಧಾನ ಮಂತ್ರಿ ಲೆವಿ ಎಶ್ಕೋಲ್, 'ಪ್ಯಾಲೆಸ್ಟೈನರೆಂದರೆ ಯಾರು? ನಾನಿಲ್ಲಿಗೆ ಬಂದಾಗ (ಪ್ಯಾಲೆಸ್ಟೈನಿಗೆ) ೨,೫೦,೦೦೦ ಜನ ಯಹೂದೇತರರು ಇದ್ದರು- ಮುಖ್ಯವಾಗಿ ಅರಬ್ಬರು ಮತ್ತು ಬೆಡುಯಿನ್‌ಗಳು. ಏನಿತ್ತು ಇಲ್ಲಿ? ಏನೇನೂ ಇಲ್ಲ, ಬರೀ ಮರಳುಗಾಡು' ಎಂದು ಹೇಳಿದರು. ಪ್ರಧಾನ ಮಂತ್ರಿ ಮೆನಾಚೆಮ್ ಬೆಗಿನ್ ಪ್ಯಾಲೆಸ್ಟೈನ್‌ರನ್ನು 'ಎರಡು ಕಾಲುಗಳ ಮೃಗಗಳು' ಎಂದು ಕರೆದರೆ, ಇಷಾಕ್ ಶಮೀರ್, ಅವರನ್ನು ಕಾಲಿನಲ್ಲಿ ಹೊಸಕಬಹುದಾದ 'ಮಿಡತೆಗಳು' ಎಂದರು. ಈ ಮಾತುಗಳು ಜನಸಾಮಾನ್ಯರದಲ್ಲ, ದೇಶದ ಮುಖಂಡರದು!

೧೯೪೭ರಲ್ಲಿ ವಿಶ್ವಸಂಸ್ಥೆ ಔಪಚಾರಿಕವಾಗಿ ಪ್ಯಾಲೆಸ್ಟೈನನ್ನು ವಿಭಜಿಸಿ ಯಹೂದಿಗಳಿಗೆ ಶೇಕಡಾ ೫೫ರಷ್ಟು ಸ್ಥಳವನ್ನು ನೀಡಿತು. ಒಂದೇ ವರ್ಷದೊಳಗೆ ಅವರು ಶೇಕಡಾ ೭೮ರಷ್ಟು ಸ್ಥಳವನ್ನು ಆಕ್ರಮಿಸಿಕೊಂಡರು. ೧೯೪೮ ಮೇ ೧೪ರಂದು ಇಸ್ರೇಲ್ ದೇಶ ಉದ್ಘೋಷಿತವಾಯಿತು. ಉದ್ಘೋಷಣೆಯ ಕೆಲವೇ ನಿಮಿಷಗಳಲ್ಲಿ ಅಮೆರಿಕಾ ಇಸ್ರೇಲನ್ನು ಗುರುತಿಸಿ ಮಾನ್ಯತೆ ನೀಡಿತು! ವೆಸ್ಟ್ ಬ್ಯಾಂಕನ್ನು ಜೋರ್ಡಾನ್ ಸೆಳೆದುಕೊಂಡರೆ ಗಾಜಾ ಪಟ್ಟಿ ಈಜಿಪ್ಟಿನ ಮಿಲಿಟರಿ ನಿಯಂತ್ರಣಕ್ಕೊಳಪಟ್ಟಿತು. ನಿರಾಶ್ರಿತರಾದ ಲಕ್ಷಾಂತರ ಪ್ಯಾಲೆಸ್ಟೈನರ ಮನಸ್ಸು ಮತ್ತು ಹೃದಯದಲ್ಲಿ ಬಿಟ್ಟು ಪ್ಯಾಲೆಸ್ಟೈನ್ ಎಂಬ ದೇಶ ಅಸ್ತಿತ್ವದಲ್ಲೇ ಇಲ್ಲದ ಹಾಗಾಯಿತು.

೧೯೬೭ರ ಬೇಸಿಗೆಯಲ್ಲಿ ಇಸ್ರೇಲ್ ಗಾಜಾ ಪಟ್ಟಿ ಮತ್ತು ವೆಸ್ಟ್ ಬ್ಯಾಂಕನ್ನು ವಶಪಡಿಸಿಕೊಂಡಿತು. ಆಕ್ರಮಿತ ಸ್ಥಳಗಳಲ್ಲಿ ನೆಲೆಸುವ ಯಹೂದಿಗಳಿಗೆ ಉತ್ತೇಜನ ನೀಡಲು ಸರ್ಕಾರದ ಸಹಾಯಧನ ಮತ್ತು ಅಭಿವೃದ್ಧಿ ನೆರವನ್ನು ನೀಡಲಾಯಿತು. ಪ್ರತಿದಿನವೂ ಪ್ಯಾಲೆಸ್ಟೈನ್ ಕುಟುಂಬಗಳನ್ನು ಅವರದೇ ಮನೆ, ಭೂಮಿಗಳಿಂದ ಹೊರದೂಡಿ ನಿರಾಶ್ರಿತರ ಶಿಬಿರಗಳಿಗೆ ಅಟ್ಟಲಾಗುತ್ತಿದೆ. ಇಸ್ರೇಲಿನಲ್ಲಿ ವಾಸಿಸುತ್ತಿರುವ ಪ್ಯಾಲೆಸ್ಟೈನರು, ಮೊದಲಿಗೆ ತಮ್ಮದೇ ತಾಯ್ನಾಡಾಗಿದ್ದ ನಾಡಿನಲ್ಲಿ ಎರಡನೇ ದರ್ಜೆಯ ಪ್ರಜೆಗಳಾಗಿ ಹಲವಾರು ಹಕ್ಕುಗಳಿಂದ ವಂಚಿತರಾಗಿ ಬದುಕುತ್ತಿದ್ದಾರೆ.

ಹಲವಾರು ದಶಕಗಳಿಂದ ಸಾಕಷ್ಟು ಬಂಡಾಯಗಳಾಗಿವೆ, ಯುದ್ಧಗಳಾಗಿವೆ ಹಾಗೂ ಇಂತಿಫದಾಗಳಾಗಿವೆ. ಸಾವಿರಾರು ಜನ ಪ್ರಾಣ ತೆತ್ತಿದ್ದಾರೆ. ಹಲವಾರು ಒಪ್ಪಂದಗಳು ಹಾಗೂ ಒಡಂಬಡಿಕೆಗಳಿಗೆ ಸಹಿ ಮಾಡಲಾಗಿದೆ. ಕದನವಿರಾಮಗಳನ್ನು ಘೋಷಿಸಲಾಗಿವೆ ಹಾಗೂ ಉಲ್ಲಂಘಿಸಿಯೂ ಆಗಿವೆ. ಆದರೆ ರಕ್ತಪಾತ ನಿಂತಿಲ್ಲ. ಅಲ್ಲಿನ ಜನ ಅಮಾನವೀಯ ಪರಿಸ್ಥಿತಿಗಳಲ್ಲಿ ಬದುಕುತ್ತಿದ್ದಾರೆ; ಇಡೀ ಊರುಗಳೇ ಸೆರೆಮನೆಗಳಾಗಿವೆ. ಅಲ್ಲಿ ಸಮೂಹ ಶಿಕ್ಷೆಗಳು, ೨೪ಗಂಟೆ ಕರ್ಫ್ಯೂಗಳು, ಪ್ರತಿನಿತ್ಯ ಅವಮಾನ, ದೌರ್ಜನ್ಯಗಳಿಗೆ ಸಿಕ್ಕಿ ನಲುಗುತ್ತಿದ್ದಾರೆ, ತಮ್ಮ ಮನೆಗಳನ್ನು ಯಾವಾಗ ಕೆಡವಬಹುದು, ತಮ್ಮ ಮಕ್ಕಳನ್ನು ಯಾವಾಗ ಗುಂಡಿಕ್ಕಿ ಕೊಲ್ಲಬಹುದು, ತಾವು ಕೈಯಾರೆ ಬೆಳೆಸಿದ ಮರಗಳನ್ನು ಯಾವಾಗ ಕಡಿಯಬಹುದು, ತಮ್ಮ ರಸ್ತೆಗಳನ್ನು ಯಾವಾಗ ಮುಚ್ಚಬಹುದು, ಆಹಾರ, ಔಷಧ ಕೊಳ್ಳಲು ಮಾರುಕಟ್ಟೆಗೆ ಯಾವಾಗ ತಮ್ಮನ್ನು ಬಿಡಬಹುದು ಎಂಬುದು ಅವರಿಗೇ ತಿಳಿದಿರುವುದಿಲ್ಲ. ಯಾವುದೇ ಸ್ವಾಭಿಮಾನವಿಲ್ಲದೆ, ಭರವಸೆಯಿಲ್ಲದೆ ಬದುಕುತ್ತಿದ್ದಾರೆ. ತಮ್ಮದೇ ಭೂಮಿಯ ಮೇಲೆ, ತಮ್ಮ ಸುರಕ್ಷಿತತೆಯ ಮೇಲೆ, ತಮ್ಮ ಚಲನೆಯ ಮೇಲೆ, ತಮ್ಮ ನೀರಿನ ಸರಬರಾಜಿನ ಮೇಲೆ ಅವರಿಗೆ ಯಾವುದೇ ನಿಯಂತ್ರಣವಿಲ್ಲ. ಯಾವುದೇ ಒಪ್ಪಂದ ಒಡಂಬಡಿಕೆಗಳಿಗೆ ಸಹಿಯಾದಾಗ ಸ್ವಾಯತ್ತತೆ, ಪ್ರತ್ಯೇಕ ರಾಷ್ಟ್ರ ಇತ್ಯಾದಿಗಳ ಬಗೆಗೆ ವಿವೇಚನೆಯಿಲ್ಲದ ವಾದವಿವಾದಗಳು ನಡೆದಾಗ ಪ್ರಶ್ನೆಗಳಿಗೆ ಉತ್ತರಗಳು ಸಿಕ್ಕುವುದೇ ಇಲ್ಲ. ಯಾವ ರೀತಿಯ ಸ್ವಾಯತ್ತತೆ? ಯಾವ ರೀತಿಯ ರಾಷ್ಟ್ರ? ಅದರ ನಾಗರಿಕರಿಗೆ ಯಾವ ರೀತಿಯ ಹಕ್ಕುಗಳಿರುತ್ತವೆ?

ತಮ್ಮ ರೋಷವನ್ನು ಹತ್ತಿಕ್ಕಲಾಗದ ಯುವ ಪ್ಯಾಲೆಸ್ಟೈನರು ತಮ್ಮನ್ನೇ ಮಾನವ ಬಾಂಬುಗಳಾಗಿ ಪರಿವರ್ತಿಸಿಕೊಂಡು ಇಸ್ರೇಲಿನ ಬೀದಿಬೀದಿಗಳನ್ನೂ ಕಾಡುತ್ತಿದ್ದಾರೆ, ತಾವೂ ಸಿಡಿದು ಚೂರಾಗುತ್ತಿದ್ದಾರೆ, ಇತರ ಸಾಮಾನ್ಯ ಜನರನ್ನೂ ಕೊಲ್ಲುತ್ತಿದ್ದಾರೆ. ಅಲ್ಲಿನ ದಿನನಿತ್ಯದ ಬದುಕೂ ಹೆದರಿಕೆಯಿಂದ ಕೂಡಿದೆ, ಪರಸ್ಪರ ಅಪನಂಬಿಕೆಗಳು ದಿನೇದಿನೇ ಬಲಿಯುತ್ತಿದೆ. ಪ್ರತಿಯೊಂದು ಬಾಂಬ್‌ಸ್ಫೋಟವೂ ಮತ್ತಷ್ಟು ಕ್ರೂರ, ಅಮಾನವೀಯ ತಿರುಗೇಟುಗಳನ್ನು ಆಹ್ವಾನಿಸುತ್ತದೆ; ಬದುಕು ಮತ್ತಷ್ಟು ದುಸ್ತರವಾಗುತ್ತದೆ. ಆದರೆ ಈ ಆತ್ಮಹತ್ಯಾ ಬಾಂಬ್‌ಸ್ಫೋಟಗಳು ವೈಯುಕ್ತಿಕ ಹತಾಶೆಯ ಅಭಿವ್ಯಕ್ತಿಯಷ್ಟೇ ಹೊರತು ಯಾವುದೇ ಕ್ರಾಂತಿಯ ತಂತ್ರವಲ್ಲ. ಪ್ಯಾಲೆಸ್ಟೈನರ ಹತಾಶೆಯ ಈ ಕೃತ್ಯಗಳು ಇಸ್ರೇಲರ ದಿನನಿತ್ಯ ಬದುಕಿನಲ್ಲಿ ಭಯೋತ್ಪಾದನೆ ಉಂಟುಮಾಡುತ್ತಿದ್ದರೂ, ಹತ್ತೊಂಬತ್ತನೆಯ ಶತಮಾನದ ಹಳೆಯ ರೀತಿಯ ವಸಾಹತುಶಾಹಿ ಮನೋಭಾವಕ್ಕೆ ಇಪ್ಪತ್ತೊಂದನೆಯ ಶತಮಾನದ 'ಯುದ್ಧ'ವೆಂಬ ಸೋಗಿನ ಮುಸುಕುಹಾಕಿ ತಮ್ಮ ದಿನನಿತ್ಯದ ದಾಳಿ ಹಾಗೂ ಆಕ್ರಮಣವನ್ನು ಮುಂದುವರೆಸಲು ಇಸ್ರೇಲ್ ಸರ್ಕಾರಕ್ಕೆ ಕಾರಣ ಸಿಕ್ಕಂತಾಗಿದೆ.

ಮೊದಲಿನಿಂದಲೂ ಇಸ್ರೇಲಿನ ಪಿತ್ರಾರ್ಜಿತ ರಾಜಕೀಯ ಮತ್ತು ಮಿಲಿಟರಿ 'ನೆಂಟ' ಅಮೆರಿಕಾ ಸರ್ಕಾರವಾಗಿದೆ. ಅಮೆರಿಕಾ ಮೊದಲಿನಿಂದಲೂ ಇಸ್ರೇಲಿನ ಜೊತೆಗೂಡಿ ಈ ಸಮಸ್ಯೆ ಬಿಕ್ಕಟ್ಟಿಗೆ ಶಾಂತಿಯುತ ಹಾಗೂ ನ್ಯಾಯಯುತ ಪರಿಹಾರ ದೊರಕಿಸಿಕೊಡುವ ವಿಶ್ವಸಂಸ್ಥೆಯ ಪ್ರಯತ್ನಗಳಿಗೆಲ್ಲ ಅಡ್ಡಗಾಲು ಹಾಕಿದೆ. ಇಸ್ರೇಲಿನ ಪ್ರತಿಯೊಂದು ಯುದ್ಧಕ್ಕೂ ಅಮೆರಿಕಾ ಬೆಂಬಲವಾಗಿ ನಿಂತಿದೆ. ಪ್ಯಾಲೆಸ್ಟೈನನ್ನು ಇಸ್ರೇಲ್ ದಾಳಿ ನಡೆಸಿದಾಗಲೆಲ್ಲಾ ಪ್ಯಾಲೆಸ್ಟೈನರ ಮನೆಗಳನ್ನು ಚೂರುಚೂರು ಮಾಡುವುದು ಅಮೆರಿಕಾದ ಕ್ಷಿಪಣಿಗಳೇ! ಪ್ರತಿ ವರ್ಷ ಅಮೆರಿಕಾದಿಂದ ಇಸ್ರೇಲ್ ಬಿಲಿಯನ್‌ಗಟ್ಟಲೆ ಡಾಲರ್ ಧನಸಹಾಯವನ್ನು ಪಡೆಯುತ್ತದೆ.

ಈ ದುರಂತದ ಕತೆಯಿಂದ ನಾವು ಕಲಿಯಬಹುದಾದರೂ ಏನು? ಚರಿತ್ರೆಯಲ್ಲಿ ಬಹುಶಃ ಯಾರೂ ಅನುಭವಿಸದಂತಹ ಅತ್ಯಂತ ಕ್ರೌರ್ಯದ ಹಿಂಸೆಯಲ್ಲಿ ನಲುಗಿದ ಯಹೂದಿಗಳಿಗೆ ತಮ್ಮಿಂದಾಗಿ ನಿರಾಶ್ರಿತರಾಗುತ್ತಿರುವ ಜನಗಳ ನೋವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲವೆ? ಅತ್ಯಂತ ಹಿಂಸೆಯ ಅನುಭವ ಕ್ರೌರ್ಯವನ್ನು ಪ್ರತಿಯಾಗಿ ಹುಟ್ಟುಹಾಕುತ್ತದೆಯೆ? ಇದು ಮಾನವ ಜನಾಂಗಕ್ಕೆ ಯಾವ ರೀತಿಯ ಭರವಸೆಯನ್ನು ನೀಡಬಹುದು. ಕೊನೆಗೆ ಪ್ಯಾಲೆಸ್ಟೈನರು ಸಂಪೂರ್ಣ ಸೋತಾಗ ಅವರ ಗತಿ ಏನಾಗಬಹುದು? ಪ್ರಭುತ್ವವಿಲ್ಲದ ರಾಷ್ಟ್ರವೊಂದು ಕೊನೆಗೆ ಪ್ರಭುತ್ವ ಸ್ಥಾಪಿಸಿದಾಗ ಅದು ಎಂತಹ ಪ್ರಭುತ್ವವಾಗಿರುತ್ತವೆ? ಅವರ ಧ್ವಜದ ಮರೆಯಲ್ಲಿ ಎಂತೆಂತಹ ಭಯಾನಕ ಕೃತ್ಯಗಳು ನಡೆಯಬಹುದು? ನಾವು ಹೋರಾಡಬೇಕಿರುವುದು ಪ್ರತ್ಯೇಕ ರಾಷ್ಟ್ರಕ್ಕಾಗಿಯೆ ಅಥವಾ ಜನಾಂಗ, ಧರ್ಮಗಳ ಎಲ್ಲೆಯನ್ನು ಮೀರಿದ ಎಲ್ಲರ ಸ್ವಾತಂತ್ರ್ಯ ಮತ್ತು ಸ್ವಾಭಿಮಾನಕ್ಕಾಗಿಯೆ?

ಪ್ಯಾಲೆಸ್ಟೈನ್ ಹಿಂದೊಮ್ಮೆ ಮಧ್ಯ ಪ್ರಾಚ್ಯದ ಧರ್ಮನಿರಪೇಕ್ಷತೆಯ 'ಓಯಸಿಸ್' ಆಗಿತ್ತು. ಆದರೆ ಈಗ, ದುರ್ಬಲ, ಭ್ರಷ್ಟ, ಪ್ರಜಾಸತ್ತಾತ್ಮಕವಲ್ಲದ, ಆದರೆ ಮತಾಭಿಮಾನಿಯಲ್ಲದ ಪ್ಯಾಲೆಸ್ಟೈನ್ ಲಿಬರೇಶನ್ ಆರ್ಗನೈಸೇಶನ್‌ನಲ್ಲಿ ಇಸ್ಲಾಂನ ಹೆಸರಲ್ಲಿ ಹೋರಾಟ ನಡೆಸಿರುವ, ಕಟ್ಟಾ ಪಂಥಾಭಿಮಾನಿಯಾಗಿರುವ ಹಮಾಸ್‌ಗಳು ಮುಂಚೂಣಿಯಲ್ಲಿದ್ದಾರೆ. ಅವರ ಪ್ರಣಾಳಿಕೆ ಹೀಗೆ ಹೇಳುತ್ತದೆ: 'ನಾವಾಗುತ್ತೇವೆ ಅದರ ಯೋಧರು ಹಾಗೂ ಶತ್ರುಗಳನ್ನು ಸುಟ್ಟು ಬೂದಿ ಮಾಡುವ ಉರಿವ ಬೆಂಕಿಯ ಉರುವಲು.'

ಆತ್ಮಾಹುತಿ ಬಾಂಬರ್‌ಗಳನ್ನು ಖಂಡಿಸುವಂತೆ ಇಡೀ ಜಗತ್ತಿಗೇ ಹೇಳಲಾಗುತ್ತಿದೆ. ಆದರೆ ಅವರ ಈ ದುರಂತ ಅಂತ್ಯದ ದೀರ್ಘ ಪಯಣದ ಹಾದಿಯನ್ನು ಉದಾಸೀನವಾಗಿ ಕಾಣಲು ಸಾಧ್ಯವೆ? ೧೯೨೨ರ ಸೆಪ್ಟೆಂಬರ್ ೧೧ ರಿಂದ ೨೦೦೨ರ ಸೆಪ್ಟೆಂಬರ್ ೧೧ರವರೆಗಿನ ಎಂಭತ್ತು ವರ್ಷಗಳ ಅವಧಿ ಯಾವುದೇ ಯುದ್ಧಕ್ಕಾದರೂ ಅತ್ಯಂತ ದೀರ್ಘಾವಧಿಯೆ. ಪ್ಯಾಲೆಸ್ಟೈನರಿಗೆ ಕೊಡಬಹುದಾದ ಉಪದೇಶ ಈ ಪ್ರಪಂಚದಲ್ಲೇನಾದರೂ ಉಳಿದಿದೆಯೆ? ಅವರು ಆತುಕೊಳ್ಳ ಬಹುದಾದ ಯಾವುದಾದರೂ ಭರವಸೆಯ ಆಕಾರರಹಿತ ಚೂರು? ಅಥವಾ ತಮ್ಮೆಡೆಗೆ ಎಸೆಯಬಹುದಾದ ಚೂರುಗಳಿಗೇ ಸಂತೃಪ್ತರಾಗಿ ತಮ್ಮನ್ನು ವರ್ಣಿಸಿರುವಂತಹ ಮೊಸಕಿಹಾಕಬಹುದಾದ ಮಿಡತೆಗಳ ಹಾಗೆ ಅಥವಾ ಎರಡು ಕಾಲುಗಳ ಮೃಗಗಳ ಹಾಗೆ ವರ್ತಿಸಬೇಕೆ? ಅಥವಾ ಗೋಲ್ಡಾಮಿಯಿರ್ ಹೇಳಿರುವ ಹಾಗೆ ತಾವು ಅಸ್ತಿತ್ವದಲ್ಲೇ ಇಲ್ಲದಿರಲು ಸತತ ಪ್ರಯತ್ನಪಡಬೇಕೆ?!

ಅಮೆರಿಕಾ ಸರ್ಕಾರ ಸದ್ದಾಂ ಹುಸೇನ್‌ನನ್ನು ಒಬ್ಬ ಯುದ್ಧಾಪರಾಧಿಯೆಂದು ತನ್ನದೇ ಜನಗಳ ಹತ್ಯೆ ಮಾಡಿರುವ ಒಬ್ಬ ಕ್ರೂರ ಮಿಲಿಟರಿ ಸರ್ವಾಧಿಕಾರಿಯೆಂದು ಹೇಳುತ್ತದೆ. ಅದು ನಿಜವೂ ಹೌದು. ೧೯೮೮ರಲ್ಲಿ ಆತ ಉತ್ತರ ಇರಾಖಿನ ನೂರಾರು ಹಳ್ಳಿಗಳನ್ನು ನೆಲಸಮ ಮಾಡಿದ; ಸಾವಿರಾರು ಕುರ್ದಿಶ್ ಜನರನ್ನು ರಾಸಾಯನಿಕ ಅಸ್ತ್ರಗಳನ್ನು ಬಳಸಿ ಹಾಗೂ ಮಶೀನ್ ಗನ್ನುಗಳಿಂದ ಕೊಲ್ಲಿಸಿದ. ಅದೇ ವರ್ಷ ಅಮೆರಿಕಾ ಸರ್ಕಾರ ಅಮೆರಿಕಾದ ಕೃಷಿ ಉತ್ಪನ್ನಗಳನ್ನು ಕೊಳ್ಳಲು ಆತನಿಗೆ ೫೦ಕೋಟಿ ಡಾಲರುಗಳ ಸಹಾಯಧನ ನೀಡಿರುವುದಾಗಿ ನಮಗೀಗ ತಿಳಿದಿದೆ. ಮರುವರ್ಷ ಆತ ತನ್ನ ಜನಹತ್ಯಾ ಕಾರ್ಯವನ್ನು ಯಶಸ್ವಿಯಾಗಿ ಮುಗಿಸಿದನಂತರ ಅಮೆರಿಕಾ ತನ್ನ ಸಹಾಯಧನವನ್ನು ದುಪ್ಪಟ್ಟು ಮಾಡಿ ೧೦೦ಕೋಟಿ ಡಾಲರುಗಳನ್ನು ನೀಡಿತು. ಅಷ್ಟಲ್ಲದೆ ಉತ್ತಮ ಗುಣಮಟ್ಟದ ಅಂತ್ರ್ಯಾಕ್ಸ್ 'ಬೀಜ'ವನ್ನು, ಹೆಲಿಕಾಪ್ಟರುಗಳನ್ನು ಹಾಗೂ ರಾಸಾಯನಿಕ ಮತ್ತು ಜೈವಿಕ ಅಸ್ತ್ರಗಳನ್ನು ತಯಾರಿಸಬಲ್ಲಂತಹ ವಸ್ತುಗಳನ್ನು ಕೊಡುಗೆಯಾಗಿ ನೀಡಿತು.

ಸದ್ದಾಂ ಹುಸೇನ್ ತನ್ನ ಕ್ರೌರ್ಯ, ದೌರ್ಜನ್ಯದ ದಬ್ಬಾಳಿಕೆ ನಡೆಸುತ್ತಿರುವಾಗ ಅಮೆರಿಕಾ ಮತ್ತು ಬ್ರಿಟನ್ ಸರ್ಕಾರಗಳು ಆತನ ಆಪ್ತ ಮಿತ್ರರಾಗಿದ್ದರು. ಇಂದಿಗೂ ಮಾನವ ಹಕ್ಕುಗಳ ಉಲ್ಲಂಘನೆಯಲ್ಲಿ ಮೇಲುಗೈ ಹೊಂದಿರುವ ಟರ್ಕಿ ಸರ್ಕಾರ ಅಮೆರಿಕಾದ ಅತ್ಯಂತ ಆಪ್ತ ಮಿತ್ರ ರಾಷ್ಟ್ರವಾಗಿದೆ. ಕುರ್ದಿಶ್ ಜನಗಳ ಮೇಲೆ ಹಲವಾರು ವರ್ಷಗಳಿಂದ ದೌರ್ಜನ್ಯ ನಡೆಸಿ ಅವರ ಹತ್ಯೆ ಮಾಡುತ್ತಿರುವ ಟರ್ಕಿ ಸರ್ಕಾರಕ್ಕೆ ಅಮೆರಿಕಾ ಅಸ್ತ್ರಗಳನ್ನು ಹಾಗೂ ಅಭಿವೃದ್ಧಿ ಧನಸಹಾಯವನ್ನು ಕೊಡುವುದು ನಿಲ್ಲಿಸಿಲ್ಲ.

ಹೀಗಿರುವಾಗ ಎಲ್ಲ ಬದಲಾದದ್ದು ಎಂದು? ೧೯೯೦ರ ಆಗಸ್ಟ್‌ನಲ್ಲಿ ಸದ್ದಾಂ ಕುವೈತ್‌ನ ಮೇಲೆ ಧಾಳಿ ಮಾಡಿದ. ಇಲ್ಲಿ ಆತ ತಪ್ಪು ಮಾಡಿದ್ದು ಯುದ್ಧ ನಡೆಸಿದ್ದರಿಂದ ಅಲ್ಲ. ತನ್ನ 'ಯಜಮಾನರ' ಅನುಮತಿ ಇಲ್ಲದೆ ಯುದ್ಧ ನಡೆಸಿದ್ದು ಇಲ್ಲಿ ಘೋರಾಪರಾಧವಾಗಿತ್ತು. ಈ ರೀತಿಯ ಆತನ ಸ್ವತಂತ್ರ ವರ್ತನೆಯಿಂದ ಸಿಟ್ಟಿಗೆದ್ದ ಅವರು ಸದ್ದಾಂನನ್ನು ಕೊನೆಗಾಣಿಸಲು ನಿರ್ಧರಿಸಿದರು. 'ಯಜಮಾನರ' ಅಪಾತ್ರದ ಸಾಕುಪ್ರಾಣಿಯನ್ನು ಇಲ್ಲವಾಗಿಸುವ ಹಾಗೆ.

ಇರಾಖ್‌ನ ಮೇಲೆ ಮಿತ್ರ ರಾಷ್ಟ್ರಗಳ ಮೊದಲ ಧಾಳಿ ಜನವರಿ ೧೯೯೧ರಲ್ಲಿ ನಡೆಯಿತು. ಇಡೀಪ್ರಪಂಚ ಈ ಯುದ್ಧವನ್ನು ತಮ್ಮ ಟಿ.ವಿ.ಗಳಲ್ಲಿ ನೋಡಿತು. ಬಾಂಬ್‌ಗಳ ಧಾಳಿಗೆ ಹತ್ತಾರು ಸಾವಿರ ಜನ ಸತ್ತರು. ವಿಯೆಟ್ನಾಂ ಯುದ್ಧದ ನಂತರದ ಅತ್ಯಂತ ದೀರ್ಘ ಯುದ್ಧ ಇದಾಗಿದೆ. ಕಳೆದ ಒಂದು ದಶಕದಲ್ಲಿ ಅಮೆರಿಕಾದ ಮತ್ತು ಬ್ರಿಟಿಷ್‌ನ ಸೈನ್ಯ ಸಾವಿರಾರು ಕ್ಷಿಪಣಿ ಮತ್ತು ಬಾಂಬ್‌ಗಳಿಂದ ಇರಾಖನ್ನು ನುಜ್ಜುಗುಜ್ಜಾಗಿಸಿದೆ. ಹೊಲಗದ್ದೆಗಳಿಗೆ ೩೦೦ ಟನ್ 'ಬಳಸಿದ ಯುರೇನಿಯಂ' ಸಿಡಿಸಿದೆ. ಬ್ರಿಟನ್ ಮತ್ತು ಅಮೆರಿಕಾದಂತಹ ದೇಶಗಳಲ್ಲಿ ಬಳಸಿದ ಯುರೇನಿಯಂ ಅನ್ನು ವಿಶೇಷವಾಗಿ ನಿರ್ಮಿಸಿದ ಕಾಂಕ್ರೀಟ್ ಸುರಂಗಗಳಲ್ಲಿ ಪರೀಕ್ಷಾರ್ಥವಾಗಿ ಸಿಡಿಸುತ್ತಾರೆ. ನಂತರ ವಿಕಿರಣ ಸೂಸುವ ಉಳಿಕೆಯನ್ನು ತೊಳೆದು ಸಿಮೆಂಟ್‌ನಿಂದ ಸೀಲ್ ಮಾಡಿ ಸಮುದ್ರದಲ್ಲಿ ಹೂತುಬಿಡುತ್ತಾರೆ (ಅದೂ ಸಹ ಕೆಟ್ಟದ್ದೆ!). ಆದರೆ ಇರಾಖ್‌ನಲ್ಲಿ ಬೇಕಂದೇ, ಕೆಟ್ಟ ಉದ್ದೇಶದಿಂದ ಜನರ ನೀರು ಮತ್ತು ಆಹಾರವನ್ನು ವಿಷಯುಕ್ತವಾಗಿಸಲು ಈ ಬಳಸಿದ ಯುರೇನಿಯಂ ಅನ್ನು ಬಳಸಲಾಗಿದೆ. ಬಾಂಬಿನ ಮಳೆ ಸುರಿಸುವಾಗ ಅವರು, ವಿದೇಶಿ ಸಹಾಯವಿಲ್ಲದೆ ರಿಪೇರಿ ಮಾಡಲು ಸಾಧ್ಯವಿಲ್ಲವೆಂದು

ತಿಳಿದಿದ್ದರೂ ಸಹ ಜಲಸಂಸ್ಕರಣಾ ಘಟಕಗಳನ್ನು ನಾಶಪಡಿಸಿದ್ದಾರೆ. ದಕ್ಷಿಣ ಇರಾಕಿನ ಮಕ್ಕಳಲ್ಲಿ ಕ್ಯಾನ್ಸರ್ ನಾಲ್ಕುಪಟ್ಟು ಹೆಚ್ಚಾಗಿದೆ. ಒಂದು ದಶಕದ ಆರ್ಥಿಕ ದಿಗ್ಬಂಧನಗಳಿಂದ ಇರಾಕಿನ ನಾಗರಿಕರಿಗೆ ಆಹಾರ, ಔಷಧ, ಆಸ್ಪತ್ರೆ ಉಪಕರಣಗಳು, ಅಂಬುಲೆನ್ಸ್‌ಗಳು, ಶುದ್ಧ ಕುಡಿಯುವ ನೀರು ಮುಂತಾದಂತಹ ಮೂಲಭೂತ ಅವಶ್ಯಕತೆಗಳು ಸಿಗದಂತೆ ಮಾಡಿದ್ದಾರೆ.

ಈ ದಿಗ್ಬಂಧನಗಳಿಂದ ಸುಮಾರು ಐದು ಲಕ್ಷ ಮಕ್ಕಳು ಸಾವಿಗೀಡಾಗಿದ್ದಾರೆ. ಅದರ ಬಗ್ಗೆ ಮಾತನಾಡುತ್ತ ವಿಶ್ವಸಂಸ್ಥೆಗೆ ಆಗಿನ ಅಮೆರಿಕಾದ ರಾಯಭಾರಿಯಾಗಿದ್ದ ಮೆಡೆಲಿನ್ ಆಲ್‌ಬ್ರೈಟ್ ಹೇಳಿದ ಮಾತು ಬಹಳ ಪ್ರಖ್ಯಾತವಾಗಿದೆ: 'ಇದು ಒಂದು ಕಠಿಣ ನಿರ್ಧಾರ. ಆದರೆ ಇದರ ಪ್ರತಿಫಲ ಅಷ್ಟೇ ಮೌಲ್ಯಯುತವಾದದ್ದು ಎಂದು ನನಗನ್ನಿಸುತ್ತದೆ.' ಅಫಘಾನಿಸ್ತಾನದ ಮೇಲಿನ ಯುದ್ಧವನ್ನು ಟೀಕಿಸಿದವರನ್ನು ನಿಂದಿಸಲು ಬಳಸಿದ ಪದ 'ನೈತಿಕ ಸಮಾನತೆ'. ಮೆಡಲಿನ್ ಆಲ್‌ಬ್ರೈಟ್‌ರಿಗೆ ನೈತಿಕ ಸಮಾನತೆ ಇಲ್ಲವೆಂದು ದೂಷಿಸಲಾಗುವುದಿಲ್ಲ. ಆಕೆ ಹೇಳಿರುವುದು ನೇರ ಬೀಜಗಣಿತ!

ಒಂದು ದಶಕದ ಬಾಂಬ್ ದಾಳಿಯಿಂದ 'ಬಾಗ್ದಾದ್‌ನ ಮೃಗ'ವಾದ ಸದ್ದಾಂ ಹುಸೇನ್‌ನನ್ನು ಕೆಳಗಿಳಿಸಲು ಸಾಧ್ಯವಾಗಿಲ್ಲ. ಈಗ, ಹನ್ನೆರಡು ವರ್ಷಗಳ ನಂತರ ಅಧ್ಯಕ್ಷ ಜಾರ್ಜ್ ಬುಶ್ ಜೂನಿಯರ್ ಮತ್ತೊಮ್ಮೆ ತನ್ನ ದಾಂಧಿಕ ಭಾಷಣ ಪ್ರಾರಂಭಿಸಿದ್ದಾರೆ.ಇರಾಕಿನಲ್ಲಿ ಆಡಳಿತ ಬದಲಾಯಿಸುವವರೆಗೂ ತನ್ನ ಯುದ್ಧ ಎಂದು ಹೇಳತೊಡಗಿದ್ದಾರೆ. ಜಾರ್ಜ್ ಬುಶ್ ಆಡಳಿತ ಹೇಗೆ ಸದ್ದಾಂ ಹುಸೇನ್‌ನನ್ನು ಎದುರಿಸಲು ಸಾರ್ವಜನಿಕರನ್ನು, ಕಾಂಗ್ರೆಸ್ಸನ್ನು ಹಾಗೂ ಮಿತ್ರ ರಾಷ್ಟ್ರಗಳ ಮನವೊಲಿಸಲು ಕರಾರುವಾಕ್ಕಾದ ಕಾರ್ಯತಂತ್ರಗಳನ್ನು ಕೈಗೊಳ್ಳುತ್ತಿದೆಯೆಂಬುದನ್ನು 'ನ್ಯೂಯಾರ್ಕ್ ಟೈಮ್ಸ್' ಪತ್ರಿಕೆ ತಿಳಿಸಿದೆ. ಶ್ವೇತಭವನದ ಸಿಬ್ಬಂದಿಯ ಮುಖಂಡರಾದ ಆಂಡ್ರ್ಯೂ ಹೆಚ್.ಕಾರ್ಡ್ ಜೂನಿಯರ್, ಬರುವ ವಸಂತಕ್ಕೆ ಹೇಗೆ ಯುದ್ಧಾವಸ್ಥೆಗಳು ನಡೆಯುತ್ತಿವೆ ಎಂಬುದನ್ನು ತಿಳಿಸಿ, 'ಮಾರಾಟದ ದೃಷ್ಟಿಯಿಂದ ಯಾವುದೇ ಹೊಸ ಉತ್ಪನ್ನವನ್ನು ಆಗಸ್ಟ್ ತಿಂಗಳಿನಲ್ಲಿ ಬಿಡುಗಡೆ ಮಾಡುವುದಿಲ್ಲ' ಎಂದಿದ್ದಾರೆ. ವಾಷಿಂಗ್ಟನ್‌ನ 'ಹೊಸ ಉತ್ಪನ್ನ' ಈಗ ಕುವೈತ್‌ನ ಜನರಿಗಾಗಿ ತೊಂದರೆ, ಹಿಂಸೆಗಳಲ್ಲ. ಬದಲಿಗೆ ಇರಾಕ್‌ನ ಬಳಿ 'ಸಮೂಹ ನಾಶದ ಅಸ್ತ್ರಗಳಿವೆ' (Weapons of mass destruction) ಎಂಬುದನ್ನು ಒತ್ತಿ ಒತ್ತಿ ಹೇಳುವುದು. ಅಧ್ಯಕ್ಷ ಬುಶ್‌ರವರ ಹಿಂದಿನ ಸಲಹಾಕಾರ ರಿಚರ್ಡ್ ಪರ್ಲ್, 'ಶಾಂತಿ ಶಾಂತಿ ಎನ್ನುವವರ ನೈತಿಕತೆಯ ಬಗೆಗಿನ ಮಾತುಗಳನ್ನು ಬದಿಗಿಟ್ಟು, ಅತ ನಮ್ಮನ್ನು ಹಿಡಿಯುವ ಮೊದಲು ನಾವು ಆತನನ್ನು ಹಿಡಿಯಬೇಕಾಗಿದೆ' ಎಂದು ಹೇಳಿದ.

ಇರಾಕಿನ ಸಮೂಹ ನಾಶದ ಅಸ್ತ್ರಗಳ ಬಗೆಗೆ ಅಸ್ತ್ರ ಪರಿವೀಕ್ಷಕರಲ್ಲಿ ಭಿನ್ನಾಭಿಪ್ರಾಯದ ವರದಿಗಳಿವೆ. ಕೆಲ ಪರಿವೀಕ್ಷಕರು ಹೇಳುವಂತೆ ಇರಾಕಿನ ಶಸ್ತ್ರನಿರ್ಮಾಣದ ರಚನಾವ್ಯವಸ್ಥೆಯನ್ನು ಕಳಚಿರುವುದರಿಂದ ಇನ್ನು ಅದಕ್ಕೆ ಶಸ್ತ್ರನಿರ್ಮಾಣದ ಸಾಮರ್ಥ್ಯವಿಲ್ಲ. ಆದರೆ ಅಮೆರಿಕಾದ ಬಳಿ ಇರುವ ಅಣು ಹಾಗೂ ರಾಸಾಯನಿಕ ಅಸ್ತ್ರಗಳ ಪ್ರಮಾಣ, ಸಾಮರ್ಥ್ಯದ ಬಗೆಗೆ ಯಾವುದೇ ಗೊಂದಲ, ಭಿನ್ನಾಭಿಪ್ರಾಯಗಳಿಲ್ಲ. ಅಮೆರಿಕಾ ಸರ್ಕಾರ ಅಸ್ತ್ರಪರಿವೀಕ್ಷಕರನ್ನು ತನ್ನ ದೇಶದೊಳಕ್ಕೆ ಸೇರಿಸುತ್ತದೆಯೆ? ಬ್ರಿಟನ್ ಅಥವಾ ಇಸ್ರೇಲ್‌ನೊಳಕ್ಕೆ?

ಇರಾಖಿನ ಬಳಿ ಅಣ್ವಸ್ತ್ರವಿದ್ದರೂ ಸಹ ಅಮೆರಿಕಾದ 'ಮುನ್ನೆಚ್ಚರಿಕೆಯ' ಧಾಳಿಗೆ ಇದು ಸಮರ್ಥನೆಯಾಗಬಲ್ಲುದೆ? ಇಡೀ ಪ್ರಪಂಚದಲ್ಲೇ ಅತ್ಯಂತ ಹೆಚ್ಚು ಅಣ್ವಸ್ತ್ರಗಳನ್ನು ಹೊಂದಿರುವ ದೇಶ ಅಮೆರಿಕಾ. ಇಡೀ ಪ್ರಪಂಚದಲ್ಲಿ ನಾಗರಿಕರ ಮೇಲೆ ಅಣ್ವಸ್ತ್ರಗಳನ್ನು ಬಳಸಿರುವ ದೇಶವೂ ಸಹ ಅದೇ. 'ಮುನ್ನೆಚ್ಚರಿಕೆ'ಯಾಗಿ ಅಮೆರಿಕಾ ಇರಾಖಿನ ಮೇಲೆ ಧಾಳಿ ನಡೆಸುವುದನ್ನು ಸಮರ್ಥಿಸಿಕೊಳ್ಳಬಹುದಾದಲ್ಲಿ ಯಾವುದಾದರೂ ಅಣ್ವಸ್ತ್ರ ಹೊಂದಿರುವ ದೇಶವೂ ಸಹ ಮತ್ತೊಂದು ದೇಶದ ಮೇಲೆ ಆಕ್ರಮಣ ಮಾಡುವುದನ್ನು ಏಕೆ ಸಮರ್ಥಿಸಿಕೊಳ್ಳಬಾರದು? ಭಾರತದ ಪಾಕಿಸ್ತಾನದ ಮೇಲೆ ಅಥವಾ ಪಾಕಿಸ್ತಾನ ಭಾರತದ ಮೇಲೆ? ಭಾರತದ ಪ್ರಧಾನಿ ಅಮೆರಿಕಾ ಸರ್ಕಾರಕ್ಕೆ ಇಷ್ಟವಾಗದಿದ್ದಲ್ಲಿ 'ಮುನ್ನೆಚ್ಚರಿಕೆ' ಯಾಗಿ ಭಾರತದ ಮೇಲೆ ಆಕ್ರಮಣ ಮಾಡಿ ಆತನನ್ನು 'ತೆಗೆದು'ಬಿಡಬಹುದೆ?

ಇತ್ತೀಚೆಗೆ ಭಾರತ ಮತ್ತು ಪಾಕಿಸ್ತಾನಗಳನ್ನು ಯುದ್ಧದ ಅಂಚಿನಿಂದ ಹಿಂದಕ್ಕೆ ಕರೆದುಕೊಳ್ಳುವಲ್ಲಿ ಅಮೆರಿಕಾ ಬಹುಮುಖ್ಯ ಪಾತ್ರ ವಹಿಸಿದೆ. ತನ್ನ ಸಲಹೆಯನ್ನು ತಾನೇ ಸ್ವತಃ ಅನುಸರಿಸಲು ಅಷ್ಟೊಂದು ಕಷ್ಟವೆ? ಒಂದೆಡೆ ಶಾಂತಿ ಶಾಂತಿ ಎನ್ನುತ್ತ ಮತ್ತೊಂದೆಡೆ ಯುದ್ಧ ನಡೆಸುತ್ತಿರುವವರು ಯಾರು? ಜಾರ್ಜ್ ಬುಶ್ ಹೇಳುವಂತೆ ಅಮೆರಿಕಾ ದೇಶ ಈ ಜಗತ್ತಿನಲ್ಲೇ 'ಅತ್ಯಂತ ಶಾಂತಿಯುತ ದೇಶ'. ದುರಂತವೆಂದರೆ ಕಳೆದ ಐವತ್ತು ವರ್ಷಗಳಿಂದ ಪ್ರತಿ ವರ್ಷ ಅಮೆರಿಕಾ ಒಂದಲ್ಲ ಒಂದು ದೇಶದೊಂದಿಗೆ ಯುದ್ಧ ನಡೆಸುತ್ತಿದೆ!

ಯುದ್ಧಗಳನ್ನು ಎಂದಿಗೂ ನಿಸ್ವಾರ್ಥ ಕಾರಣಗಳಿಗಾಗಿ ನಡೆಸುವುದಿಲ್ಲ. ಅವು ಸಾಮಾನ್ಯವಾಗಿ ಯಾಜಮಾನ್ಯಕ್ಕಾಗಿ ಹಾಗೂ ವ್ಯಾಪಾರಕ್ಕಾಗಿ. ಇದರ ಜೊತೆಗೆ ಯುದ್ಧದ ವ್ಯಾಪಾರವಿದ್ದೇ ಇರುತ್ತದೆ. ಪ್ರಪಂಚದ ತೈಲ ಭಂಡಾರದ ತನ್ನ ನಿಯಂತ್ರಣವನ್ನು ರಕ್ಷಿಸಿಕೊಳ್ಳುವುದು ಅಮೆರಿಕಾ ವಿದೇಶಾಂಗ ಕಾರ್ಯನೀತಿಯ ಮೂಲಭೂತ ತಂತ್ರ. ಅಮೆರಿಕಾದ ಇತ್ತೀಚಿನ ಬಾಲ್ಕನ್ ಮತ್ತು ಮಧ್ಯ ಏಷಿಯಾಗಳಲ್ಲಿನ ಮಿಲಿಟರಿ ಕಾರ್ಯಾಚರಣೆ ತೈಲಕ್ಕೆ ಸಂಬಂಧಿಸಿದುದು. ಈಗ ಆಫಘಾನಿಸ್ತಾನದಲ್ಲಿ ಅಮೆರಿಕಾ ಕೂರಿಸಿರುವ ಅಧ್ಯಕ್ಷ ಹಮೀದ್ ಕರ್‌ಜಾಯ್ ಅಮೆರಿಕಾ ಮೂಲದ ತೈಲ ಕಂಪನಿಯಾದ ಯುನೋಕಲ್‌ನ ಉದ್ಯೋಗಿಯಾಗಿದ್ದಾತ. ಅಮೆರಿಕಾ ಸರ್ಕಾರ ಮಧ್ಯ ಪ್ರಾಚ್ಯ ರಾಷ್ಟ್ರಗಳನ್ನು ಹುಚ್ಚು ಹಿಡಿದಂತೆ ಗಸ್ತು ಹೊಡೆಯುತ್ತಿರುವುದು ಏಕೆಂದರೆ ಅಲ್ಲಿ ಪ್ರಪಂಚದ ಮೂರನೇ ಎರಡರಷ್ಟು ತೈಲ ಸಂಗ್ರಹವಿದೆ. ಅಮೆರಿಕಾದ ಎಂಜಿನ್ನುಗಳು ಸರಾಗವಾಗಿ ಸದಾ ಓಡುತ್ತಿರಬೇಕಾದರೆ ತೈಲ ಬೇಕೇಬೇಕು. ವಿಶ್ವದ ತೈಲವನ್ನು ನಿಯಂತ್ರಿಸುವವರು ವಿಶ್ವದ ಮಾರುಕಟ್ಟೆಯನ್ನೂ ನಿಯಂತ್ರಿಸುತ್ತಾರೆ. ಹೀಗಿರುವಾಗ ತೈಲವನ್ನು ನಿಯಂತ್ರಿಸುವುದು ಹೇಗೆ?

ಇದನ್ನು ಅತ್ಯಂತ ನಾಜೂಕಾಗಿ 'ನ್ಯೂಯಾರ್ಕ್ ಟೈಮ್ಸ್'ನ ಅಂಕಣಕಾರ ಥಾಮಸ್ ಫ್ರೀಡ್‌ಮನ್ ಹೇಳಿದ್ದಾನೆ. ತನ್ನ ಲೇಖನ `Craziness Pays' ನಲ್ಲಿ ಆತ 'ಯಾವುದೇ ಮಾತುಕತೆ ಇಲ್ಲದೆ, ಹಿಂಜರಿಕೆ ಇಲ್ಲದೆ ಹಾಗೂ ವಿಶ್ವಸಂಸ್ಥೆಯ ಸಮ್ಮತಿ ಇಲ್ಲದೆ ತಾನು ಬಲಪ್ರಯೋಗ ಮಾಡುವುದಾಗಿ ಅಮೆರಿಕಾ, ಇರಾಖ್ ಮತ್ತು ಅಮೆರಿಕಾದ ಮಿತ್ರ ರಾಷ್ಟ್ರಗಳಿಗೆ ನೇರವಾಗಿ ಹೇಳಬೇಕು.' ಆತನ ಸಲಹೆಯನ್ನು ಅಮೆರಿಕಾ ಸರ್ಕಾರ ಸಂಪೂರ್ಣವಾಗಿ ಸ್ವೀಕರಿಸಿದೆ. ಅದೇ ಫ್ರೀಡ್‌ಮನ್ ತನ್ನ ಪುಸ್ತಕ The Lexus and the Olive Tree ನಲ್ಲಿ ಹೀಗೆಂದು ಹೇಳಿದ್ದಾನೆ;

'ಮುಕ್ತ ಮಾರುಕಟ್ಟೆಯ ಅದೃಶ್ಯ ಕೈ ಅದೃಶ್ಯ ಬಿಗಿಮುಷ್ಟಿ ಇಲ್ಲದೆ ಕೆಲಸ ಮಾಡದು. ಮ್ಯಾಕ್‌ಡೋನಾಲ್ಡ್ ಕಂಪನಿ ಮ್ಯಾಕ್‌ಡೊನೆಲ್ ಡಗ್ಲಾಸ್ ಇಲ್ಲದೆ ಏಳಿಗೆಯಾಗದು. ಅದೇ ರೀತಿ, ಸಿಲಿಕಾನ್ ವ್ಯಾಲಿಯ ತಂತ್ರಜ್ಞಾನಗಳ ಏಳಿಗೆಗಾಗಿ ಅದನ್ನು ಸುರಕ್ಷಿತವಾಗಿಡುವ ಬಿಗಿಮುಷ್ಟಿಗಳು ಯಾವುವೆಂದರೆ ಅಮೆರಿಕಾದ ಸೈನ್ಯ, ವಾಯುಸೇನೆ, ನೌಕಾಪಡೆ ಮತ್ತು ಸಾಗರ ಸೇನೆ.' ಬಹುಶಃ ಇದನ್ನು ಯಾವುದೊ ದುರ್ಬಲ ಕ್ಷಣದಲ್ಲಿ ಬರೆದಿರಬಹುದು. ಆದರೆ ನಾನು ಇದುವರೆಗೂ ಓದಿರುವ ಕಾರ್ಪೊರೇಟ್ ಜಾಗತೀಕರಣದ ಬಗೆಗಿನ ಅತ್ಯಂತ ನಿಖರ ಹಾಗೂ ಸಂಕ್ಷಿಪ್ತ ಬರಹವಿದು.

೨೦೦೧ ಸೆಪ್ಟೆಂಬರ್ ೧೧ರ ನಂತರದ ಭಯೋತ್ಪಾದನೆಯ ವಿರುದ್ಧದ ಸಮರದಲ್ಲಿ ಈ ಅದೃಶ್ಯ ಕೈ ಮತ್ತು ಅದೃಶ್ಯ ಬಿಗಿಮುಷ್ಟಿಯ ಮೇಲಿನ ಹೊದಿಕೆ ಹಾರಿಹೋಗಿ ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಮೇಲೆ ಮುಗುಳ್ನಗೆಯಿಲ್ಲದ ಮುಗುಳ್ನಗೆಯಿಂದ ಹಾಕಲು ಕಾದಿರುವ ಅಮೆರಿಕಾದ ಹೊಸ ಅಸ್ತ್ರ-ಮುಕ್ತ ಮಾರುಕಟ್ಟೆ - ಈಗ ಬಟಾಬಯಲಾಗಿದೆ. ಅಮೆರಿಕಾದ 'ಎಂದಿಗೂ ಮುಗಿಯದ ಕಾರ್ಯ' ಒಂದು ಕರಾರುವಾಕ್ಕಾದ ಯುದ್ಧವಾಗಿದೆ ಹಾಗೂ ಅದು ಅಮೆರಿಕಾದ ನಿರಂತರ ಸಾಮ್ರಾಜ್ಯಶಾಹಿಯ ವಿಸ್ತರಣೆಗೆ ಹೇಳಿಮಾಡಿಸಿದಂತಹ ವಾಹಕವಾಗಿದೆ. ಉರ್ದುವಿನಲ್ಲಿ ಲಾಭಕ್ಕಿರುವ ಪದ 'ಫಾಯ್ದಾ'. 'ಅಲ್ ಖೈದಾ' ಎಂದರೆ ಮಾತು, ನಿಯಮ. ಹಾಗಾಗಿ ನಾವು ಕೆಲವರು ಭಯೋತ್ಪಾದನೆಯ ವಿರುದ್ಧದ ಸಮರವನ್ನು 'ಅಲ್ ಖೈದಾ V/s ಅಲ್‌ಫಾಯ್ದಾ' ಎನ್ನುತ್ತೇವೆ.

ಈ ಕ್ಷಣ ಅಲ್ ಫಾಯ್ದಾದ ಮೇಲುಗೈ ಇದ್ದ ಹಾಗಿದೆ. ಆದರೆ ಯಾರಿಗೆ ಗೊತ್ತು ಏನಾಗುತ್ತದೋ ಎಂದು.............?

ಕಳೆದ ಹತ್ತು ವರ್ಷಗಳ ಲಂಗುಲಗಾಮಿಲ್ಲದ ಕಾರ್ಪೊರೇಟ್ ಜಾಗತೀಕರಣದಿಂದಾಗಿ ವಿಶ್ವದ ಒಟ್ಟಾರೆ ಆದಾಯ ವಾರ್ಷಿಕ ಶೇಕಡಾ ೨.೫ರಷ್ಟು ಹೆಚ್ಚಾಗಿದೆ! ಆದರೂ ವಿಶ್ವದ ಬಡವರ ಸಂಖ್ಯೆ ಹತ್ತು ಕೋಟಿಯಷ್ಟು ಹೆಚ್ಚಾಗಿದೆ! ವಿಶ್ವದ ೧೦೦ ಅತಿದೊಡ್ಡ ಏಕಾನಮಿಗಳಲ್ಲಿ ೫೧ ಕಾರ್ಪೊರೇಶನ್‌ಗಳವೇಯೇ ಹೊರತು ಯಾವುದೇ ದೇಶಗಳಲ್ಲ. ವಿಶ್ವದ ಮೇಲ್‌ಸ್ತರದ ಶೇ.೧ ಜನರ ಆದಾಯ ಕೆಳಸ್ತರದ ಶೇ.೫೭ ಜನರ ಒಟ್ಟಾರೆ ಆದಾಯಕ್ಕೆ ಸಮನಾಗಿದೆ ಹಾಗೂ ಈ ಅಂತರ ದಿನೇದಿನೇ ಹೆಚ್ಚಾಗುತ್ತಿದೆ. ಈಗ ಭಯೋತ್ಪಾದನೆಯ ವಿರುದ್ಧ ಸಮರದಿಂದ ಈ ಅಂತರವನ್ನು ವೇಗಗತಿಯಲ್ಲಿ ಹೆಚ್ಚಿಸುವ ಪ್ರಯತ್ನಗಳು ನಡೆಯುತ್ತಿವೆ; ಸೂಟುಬೂಟುಗಳಲ್ಲಿನ ಜನರು ಆತುರದಲ್ಲಿದ್ದಾರೆ. ನಮ್ಮ ಮೇಲೆ ಬಾಂಬುಗಳ ಮಳೆಸುರಿದಂತೆ, ದಿಗಂತದಲ್ಲಿ ಕ್ಷಿಪಣಿಗಳು ಹಾರಾಡುತ್ತಿರುವಂತೆ, ಜಗತ್ತನ್ನು ಹೆಚ್ಚು ಸುರಕ್ಷಿತವಾಗಿಸಲು ಅಣ್ವಸ್ತ್ರಗಳ ಸಂಗ್ರಹ ಹೆಚ್ಚಾದಂತೆ ಕಾಂಟ್ರಾಕ್ಟುಗಳಿಗೆ ಸಹಿ ಬೀಳುತ್ತಿವೆ. ಪೇಟೆಂಟುಗಳನ್ನು ನೋಂದಾಯಿಸಲಾಗುತ್ತಿದೆ. ತೈಲ ಸಾಗಾಣಿಕೆಗೆ ಪೈಪುಗಳನ್ನು ಹಾಕಲಾಗುತ್ತಿದೆ. ಪ್ರಕೃತಿಯ ಸಂಪನ್ಮೂಲಗಳನ್ನು ಕೊಳ್ಳೆಹೊಡೆಯಲಾಗುತ್ತಿದೆ. ನೀರನ್ನು ಖಾಸಗೀಕರಣ ಮಾಡಲಾಗುತ್ತಿದೆ ಹಾಗೂ ಪ್ರಜಾಸತ್ತೆಗಳನ್ನು ಕೆಳಗುರುಳಿಸಲಾಗುತ್ತಿದೆ!

ಭಾರತದಂತಹ ದೇಶದಲ್ಲಿ ಕಾರ್ಪೊರೇಟ್ ಜಾಗತೀಕರಣ ಜನಸಾಮಾನ್ಯರ ಬದುಕನ್ನು ಛಿದ್ರ ಛಿದ್ರವಾಗಿಸುತ್ತಿದೆ. 'ಅಭಿವೃದ್ಧಿ' ಯೋಜನೆಗಳು, ಬೃಹತ್ ಪ್ರಮಾಣದ ಖಾಸಗೀಕರಣ ಮತ್ತು ಕಾರ್ಮಿಕ 'ಸುಧಾರಣೆ' ಕಾರ್ಯಗಳು ಜನರನ್ನು ತಮ್ಮ ಭೂಮಿ, ಮನೆಗಳಿಂದ, ಉದ್ಯೋಗಗಳಿಂದ ಚರಿತ್ರೆಯಲ್ಲಿ ಎಂದೂ ಇಲ್ಲದ ರೀತಿಯಲ್ಲಿ ಹೊರದೂಡುತ್ತಿವೆ. ವಿಶ್ವದಾದ್ಯಂತ

'ಮುಕ್ತ ಮಾರುಕಟ್ಟೆ' ಪಾಶ್ಚಿಮಾತ್ಯರ ಮಾರುಕಟ್ಟೆಯನ್ನು ರಕ್ಷಿಸುತ್ತಿರುವಂತೆ, ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ವ್ಯಾಪಾರ ನಿರ್ಬಂಧಗಳನ್ನು ತೆರೆಯಲು ಒತ್ತಾಯಿಸುತ್ತಿದೆ ಮತ್ತು ಬಡವರನ್ನು ಹೆಚ್ಚು ಬಡವರನ್ನಾಗಿಸುತ್ತಿದೆ ಹಾಗೂ ಸಾಹುಕಾರರನ್ನು ಹೆಚ್ಚು ಸಾಹುಕಾರರನ್ನಾಗಿಸುತ್ತಿದೆ. ಈ 'ಜಾಗತಿಕ' ಗ್ರಾಮದಲ್ಲಿ ಸಾರ್ವಜನಿಕರು ಬಂಡೇಳುತ್ತಿದ್ದಾರೆ. ಅರ್ಜೆಂಟೈನಾ, ಬ್ರೆಜಿಲ್, ಮೆಕ್ಸಿಕೊ, ಬೊಲಿವಿಯಾ ಮತ್ತು ಭಾರತದಂತಹ ದೇಶಗಳಲ್ಲಿ ಕಾರ್ಪೊರೇಟ್ ಜಾಗತೀಕರಣದ ವಿರುದ್ಧದ ಪ್ರತಿಭಟನೆಗಳು ದಿನೇದಿನೇ ಬೆಳೆಯುತ್ತಿವೆ. ಅವುಗಳನ್ನು ನಿಯಂತ್ರಿಸಲು ಸರ್ಕಾರಗಳು ತಮ್ಮ ಮುಷ್ಟಿಗಳನ್ನು ಬಿಗಿಗೊಳಿಸುತ್ತಿವೆ. ಪ್ರತಿಭಟನಾಕಾರರನ್ನು ಭಯೋತ್ಪಾದಕರೆಂದು ಕರೆಯಲಾಗುತ್ತಿದೆ. ಈ ಬಂಡಾಯ ಹರತಾಳ, ಮೆರವಣಿಗೆಗಳಷ್ಟೇ ಆಗಿಲ್ಲ. ದುರಾದೃಷ್ಟವೆಂದರೆ ಅದು ಬದುಕಿನ ಎಲ್ಲ ಹಂತಗಳಲ್ಲೂ ಕಾಣಿಸಿಕೊಂಡು ಗೊಂದಲಗಳಿಗೆ, ಅಪರಾಧ, ಹಿಂಸೆಗಳಿಗೆ ಕಾರಣವಾಗಿದೆ. ಇದರಿಂದಾದ ಹತಾಶೆಯಿಂದ ಚರಿತ್ರೆಯಲ್ಲಿ ನಾವು ಕಂಡಿರುವಂತೆ (ಹಾಗೂ ನಾವು ಈಗ ಕಾಣುತ್ತಿರುವಂತೆ) ಸಾಂಸ್ಕೃತಿಕ ರಾಷ್ಟ್ರೀಯತೆ, ಮತಾಂಧತೆ, ಫ್ಯಾಸಿಸಂ ಮತ್ತು ನಮಗೆಲ್ಲ ತಿಳಿದಿರುವಂತೆ, ಭಯೋತ್ಪಾದಕತೆಗೆ ಎಡೆಮಾಡಿಕೊಟ್ಟಿದೆ.

ಇವೆಲ್ಲಾ ಕಾರ್ಪೋರೇಟ್ ಜಾಗತೀಕರಣದ ಜೊತೆಯಲ್ಲೇ ಹೆಗಲಿಗೆ ಕೈ ಹಾಕಿ ಹೊರಟಿರುವಂತಹವು.

ಮುಕ್ತ ಮಾರುಕಟ್ಟೆಯಿಂದ ರಾಷ್ಟ್ರೀಯ ಎಲ್ಲೆಗಳು ಇಲ್ಲವಾಗುತ್ತವೆ ಹಾಗೂ ಕಾರ್ಪೊರೇಟ್ ಜಾಗತೀಕರಣದಿಂದ ದೇಶಗಳೇ ಇಲ್ಲದಂತಾಗುತ್ತದೆಂಬ ನಂಬಿಕೆಯಿದೆ. ಇಲ್ಲಿ ಹೃದಯಗಳೇ ಪಾಸ್‌ಪೋರ್ಟ್‌ಗಳು ಹಾಗೂ ನಾವೆಲ್ಲಾ ಜಾನ್ ಲೆನ್ನನ್‌ನ ಹಾಡಿನ ನಾಡಿನಲ್ಲಿ 'ಊಹಿಸಿ ಕೊಳ್ಳಿ, ದೇಶಗಳೇ ಇಲ್ಲದ ನಾಡಿನಲ್ಲಿ............." ಸುಖಸಂತೋಷಗಳಿಂದ ಬದುಕುತ್ತಿರುತ್ತೇವೆ. ಇದೊಂದು ಹುಸಿ ನಂಬಿಕೆ.

ಮುಕ್ತಮಾರುಕಟ್ಟೆ ಇಲ್ಲವಾಗಿಸುವುದು ದೇಶಗಳ ಗಡಿಗಳನ್ನಲ್ಲ. ಬದಲಿಗೆ ಪ್ರಜಾಸತ್ತೆಯನ್ನು. ಬಡವರ ಹಾಗೂ ಸಿರಿವಂತರ ನಡುವಿನ ಅಂತರ ಹೆಚ್ಚಿದಂತೆ ಅದೃಶ್ಯ ಮುಷ್ಟಿಗೆ ಕೆಲಸ ಸಾಕಷ್ಟಿದೆ. ಬಹುರಾಷ್ಟ್ರೀಯ ಕಾರ್ಪೋರೇಶನ್ನುಗಳಿಗೆ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಆಯಾ ದೇಶದ ಆಡಳಿತೆಯೊಂದಿಗೆ (ಪೋಲಿಸ್, ನ್ಯಾಯಾಲಯ ಹಾಗೂ ಕೆಲವೊಮ್ಮೆ ಸೈನ್ಯ) 'ಹೊಂದಾಣಿಕೆ' ಇಲ್ಲದಿದ್ದಲ್ಲಿ ತಮ್ಮ ಲಾಭದಾಯಕ ವ್ಯಾಪಾರ ವಹಿವಾಟು ಸ್ಥಾಪಿಸಲಾಗುವುದಿಲ್ಲ. ಇಂದು ಕಾರ್ಪೊರೇಟ್ ಜಾಗತೀಕರಣಕ್ಕೆ ಬೇಕಿರುವುದು ಬಡದೇಶಗಳಲ್ಲಿ ಕುಖ್ಯಾತ 'ಸುಧಾರಣೆ'ಗಳನ್ನು ತರುವಂತಹ, ಬಂಡಾಯವನ್ನು ಹತ್ತಿಕ್ಕಬಲ್ಲಂತಹ, ಭ್ರಷ್ಟ ಹಾಗೂ ಸ್ವಾಮಿನಿಷ್ಠ ಸರ್ವಾಧಿಕಾರದ ಸರ್ಕಾರಗಳು. ಅದಕ್ಕೆ ಸ್ವತಂತ್ರವೆಂದು ನಟಿಸುವ ಪತ್ರಿಕಾರಂಗವಿರಬೇಕು. ನ್ಯಾಯನೀಡುವಂತೆ ನಟಿಸುವ ನ್ಯಾಯಾಂಗವಿರಬೇಕು. ಅದಕ್ಕೆ ಅಣ್ವಸ್ತ್ರಗಳಿರಬೇಕು. ಸದಾ ಸಿದ್ಧವಿರುವ ಸೇನೆಯಿರಬೇಕು. ಕಟ್ಟುನಿಟ್ಟಾದ ವಲಸೆ ಕಾನೂನುಗಳಿರಬೇಕು ಹಾಗೂ ಸದಾ ಹದ್ದಿನಕಣ್ಣಿನಿಂದ ಕಾಯುವ ಕರಾವಳಿ ಕಾವಲು ಪಡೆಯಿರಬೇಕು. ಏಕೆಂದರೆ ಹಣ, ಸರಕು, ಪೇಟೆಂಟ್‌ಗಳು ಮತ್ತು ಸೇವೆಗಳು ಮಾತ್ರ ಜಾಗತೀಕರಣಗೊಳ್ಳಬೇಕು. ಆದರೆ ಜನರ ವಲಸೆ, ಓಡಾಟಗಳು ಮಾತ್ರ ನಿರ್ಬಂಧಿತವಾಗಿರಬೇಕು. ಮಾನವ ಹಕ್ಕುಗಳಿಗೆ ಯಾವುದೇ ಮಾನ್ಯತೆ ಕೊಡಬಾರದು. ಜನಾಂಗಭೇದ ಅಥವಾ ರಾಸಾಯನಿಕ

ಮತ್ತು ಅಣ್ವಸ್ತ್ರಗಳ ಬಗೆಗಿನ ಅಥವಾ ಪರಿಸರ ಮಾಲಿನ್ಯದ ಬಗೆಗೆ ಹಾಗೂ ನ್ಯಾಯದ ಬಗೆಗೆ ಯಾವುದೇ ಅಂತಾರಾಷ್ಟ್ರೀಯ ಒಪ್ಪಂದ, ಒಡಂಬಡಿಕೆಗಳಾಗಬಾರದು.

ಅಫಘಾನಿಸ್ತಾನದ ಪಾಳು ಅವಶೇಷಗಳಲ್ಲಿ ಪ್ರಾರಂಭವಾದ ಭಯೋತ್ಪಾದನೆಯ ವಿರುದ್ಧದ ಸಮರದ ನಂತರ ಒಂದು ದೇಶದ ನಂತರ ಮತ್ತೊಂದು ದೇಶದಂತೆ ಸ್ವಾತಂತ್ರ್ಯರಕ್ಷಣೆಯ ಹೆಸರಿನಲ್ಲಿ ಸ್ವಾತಂತ್ರ್ಯವನ್ನು ಹತ್ತಿಕ್ಕಲಾಗುತ್ತಿದೆ. ಪ್ರಜಾಸತ್ತೆಯ ರಕ್ಷಣೆಯ ಹೆಸರಿನಲ್ಲಿ ಮಾನವ ಹಕ್ಕುಗಳ ಉಲ್ಲಂಘನೆಯಾಗುತ್ತಿದೆ. ಎಲ್ಲ ರೀತಿಯ ಬಂಡಾಯಗಳಿಗೆ 'ಭಯೋತ್ಪಾದಕತೆಯ' ಹಣೆಪಟ್ಟಿ ಹಚ್ಚಲಾಗುತ್ತಿದೆ; ಅದನ್ನು ಹತ್ತಿಕ್ಕಲು ಹೊಸಹೊಸ ಕಾನೂನುಗಳನ್ನು ಮಾಡಲಾಗುತ್ತಿದೆ. ಒಸಾಮ ಬಿನ್ ಲಾಡೆನ್ ಎಲ್ಲೋ ಅದೃಶ್ಯವಾದಂತಿದೆ. ಮುಲ್ಲಾ ಓಮರ್ ಮೋಟಾರ್ ಬೈಕಿನಲ್ಲಿ ಓಡಿಹೋದನಂತೆ. ತಾಲಿಬಾನ್ ಕಣ್ಮರೆಯಾಗಿರಬಹುದು. ಆದರೆ ಅವರು ಒದಗಿಸುತ್ತಿದ್ದ 'ನ್ಯಾಯ' ಈಗ ನಾವು ಊಹಿಸಲಾಗದಂತಹ ಸ್ಥಳಗಳಲ್ಲೂ ಕಾಣಿಸಿಕೊಳ್ಳುತ್ತಿದೆ- ಭಾರತದಲ್ಲಿ, ಪಾಕಿಸ್ತಾನದಲ್ಲಿ, ನೈಜೀರಿಯಾದಲ್ಲಿ, ಅಮೆರಿಕಾದಲ್ಲಿ, ಸರ್ವಾಧಿಕಾರಿಗಳ ಎಲ್ಲ ಮಧ್ಯ ಏಷಿಯಾದ ರಾಷ್ಟ್ರಗಳಲ್ಲಿ ಹಾಗೂ ಅಮೆರಿಕಾ ಬೆಂಬಲಿತ ಸರ್ಕಾರವಿರುವ ಅಫಘಾನಿಸ್ತಾನದಲ್ಲೂ ಸಹ.

ಇತ್ತ ಮಾರುಕಟ್ಟೆಯಲ್ಲಿ ಎಲ್ಲಾ ಮಾರಾಟಕ್ಕಿದೆ, ಅದೂ ಸೋವಿ ಬೆಲೆಯಲ್ಲಿ! ಸಾಗರಗಳು, ನದಿಗಳು, ತೈಲ, ವಂಶವಾಹಿಗಳು, ಕವಚಗಳು, ಬಾಲ್ಕೊ, ಅಲ್ಯೂಮಿನಿಯಂ ಫ್ಯಾಕ್ಟರಿಗಳು, ಫೋನ್ ಕಂಪನಿಗಳು, ವಿವೇಕ, ವನ್ಯಮೃಗಗಳು, ಕಾಡುಗಳು, ಮಾನವ ಹಕ್ಕುಗಳು, ಪರಿಸರ, ಗಾಳಿ ಹಾಗೂ ೪೬೦ಕೋಟಿ ವರ್ಷಗಳ ಜೀವ ವಿಕಾಸ ಎಲ್ಲವುಗಳನ್ನು ಪ್ಯಾಕ್ ಮಾಡಿ, ಗುರುತುಪಟ್ಟಿ ಹಚ್ಚಿ ಮಾರಾಟಕ್ಕೆಂದು ಪೇರಿಸಿಡಲಾಗಿದೆ. ಇನ್ನು ನ್ಯಾಯದ ಬಗ್ಗೆ ಹೇಳುವುದಾದರೆ ಅದೂ ಸಹ ಮಾರಾಟಕ್ಕಿದೆಯೆಂದು ಕೇಳಿದ್ದೇನೆ. ನೀವು ಕೊಡುವ ಹಣಕ್ಕೆ ತಕ್ಕಂತೆ ಅತ್ಯಂತ 'ಉತ್ತಮ' ವಾದುದನ್ನೇ ಪಡೆಯಬಹುದು.

ಭಯೋತ್ಪಾದಕತೆಯ ವಿರುದ್ಧದ ಸಮರದ ಬಗೆಗೆ ಹೇಳುತ್ತ ಅಮೆರಿಕನ್ನರನ್ನು ಅವರ ಬದುಕು ಬದುಕುತ್ತಿರುವಂತೆ ಮುಂದುವರಿಸಲು ಬಿಡುವುದೆ ಆ ಸಮರದ ಉದ್ದೇಶ ಎಂದು ಹೇಳಿದ್ದರು. ಹುಚ್ಚು ರಾಜ ಗುಟುರುಹಾಕಿದರೆ ಗುಲಾಮರು ತಮ್ಮ ಮನೆಯಲ್ಲಿ ನಡುಗಿದರಂತೆ. ಆದರೆ ನಾನು ಹೇಳುವ ಕಟುವಾಸ್ತವವೆಂದರೆ 'ಅಮೆರಿಕನ್ನರು ಬದುಕುತ್ತಿರುವ ಬದುಕು' ನಿಜವಾಗಿಯೂ ಸುಸ್ಥಿರವಲ್ಲ. ಏಕೆಂದರೆ, ಅಮೆರಿಕಾದ ಹೊರಗೂ ಬೇರೆ ಪ್ರಪಂಚವಿದೆಯೆಂದು ಅವರು ನಂಬುವುದೇ ಇಲ್ಲ.

ಅದೃಷ್ಟವೆಂದರೆ, ಅಧಿಕಾರಕ್ಕೂ ಸೀಮಿತ ಅವಧಿಯಿದೆ. ಇಂದಲ್ಲ ನಾಳೆ, ಸಮಯ ಬಂದಾಗ ಈ ಬೃಹತ್ ಸಾಮ್ರಾಜ್ಯವೂ ಹಿಂದೆ ತಾನೇ ಕಣ್ಣಾರೆಕಂಡ ಇತರ ಸಾಮ್ರಾಜ್ಯಗಳ ಹಾಗೆ, ತನ್ನಿಂತಾನೇ ಆಂತರಿಕವಾಗಿ ವಿಸ್ಫೋಟಗೊಳ್ಳುವ ಮುನ್ನ ಕುಸಿಯಬಹುದು. ಈಗಾಗಲೇ ಅದರ ರಚನಾ ಹಂದರದಲ್ಲಿ ಬಿರುಕುಗಳು ಕಾಣಿಸಿಕೊಳ್ಳುತ್ತಿವೆ. ಅದರ ಭಯೋತ್ಪಾದಕತೆಯ ವಿರುದ್ಧದ ಸಮರದ ಜಾಲ ವಿಸ್ತಾರವಾದಂತೆ ಅದರ ಹೃದಯ ನೆತ್ತರು ಕಾರತೊಡಗಿದೆ. ಪ್ರಜಾಸತ್ತೆಯ ಬಗೆಗೆ ಎಷ್ಟೇ ಬುಡಬುಡಿಕೆಯ ಮಾತುಗಳಿದ್ದರೂ ಸಹ ಇಂದು ಇಡೀ ಪ್ರಪಂಚವನ್ನು ನಿಯಂತ್ರಿಸುತ್ತಿರುವ ಮೂರು ಅತಿರಹಸ್ಯ ಸಂಸ್ಥೆಗಳು-ಅಂತಾರಾಷ್ಟ್ರೀಯ ಮಾನಿಟರಿ ಫಂಡ್, ವಿಶ್ವ ಬ್ಯಾಂಕ್ ಮತ್ತು ವರ್ಲ್ಡ್

ಟ್ರೇಡ್ ಸೆಂಟರ್. ಈ ಮೂರು ಸಂಸ್ಥೆಗಳ ಯಾಜಮಾನ್ಯತೆ ಅಮೆರಿಕಾದ ಹಿಡಿತದಲ್ಲೇ ಇದೆ. ಅವುಗಳ ನಿರ್ಧಾರಗಳು ಯಾವಾಗಲೂ ರಹಸ್ಯವಾಗಿರುತ್ತವೆ. ಅವುಗಳ ಮುಖಂಡರನ್ನು ಯಾರಿಗೂ ತಿಳಿಯದಂತೆ ಪರದೆಯ ಹಿಂದೆ ನೇಮಿಸಲಾಗುತ್ತದೆ. ಯಾರಿಗೂ ಅವರ ಬಗ್ಗೆ ಅವರ ರಾಜಕೀಯದ ಬಗ್ಗೆ ಅವರ ನಂಬಿಕೆಗಳ ಬಗ್ಗೆ ಹಾಗೂ ಅವರ ಉದ್ದೇಶಗಳ ಬಗ್ಗೆ ತಿಳಿದಿರುವುದಿಲ್ಲ. ಅವರನ್ನು ಯಾರೂ ಚುನಾಯಿಸುವುದಿಲ್ಲ ಹಾಗೂ ಅವರು ನಮ್ಮ ಪರವಾಗಿ ನಿರ್ಧಾರಗಳನ್ನು ತೆಗೆದುಕೊಳ್ಳುವರೆಂದು ನಮಗೆ ಯಾರೂ ತಿಳಿಸಿರುವುದಿಲ್ಲ. ದುರಾಸೆಯ ಬ್ಯಾಂಕರ್‌ಗಳು ಹಾಗೂ ಮುಖ್ಯಾಧಿಕಾರಿಗಳು ನಡೆಸುವಂತಹ ಈ ವಿಶ್ವ ಬಹುಶಃ ಬಹುಕಾಲ ಬಾಳಲಾರದು.

ಸೋವಿಯತ್ ಶೈಲಿಯ ಕಮ್ಯೂನಿಸಂ ಸೋಲಲು ಕಾರಣ ಅದು ಆಂತರಿಕವಾಗಿ ಕೆಟ್ಟದಾಗಿತ್ತು ಎಂದಲ್ಲ. ಅದರಲ್ಲಿ ದೋಷಗಳಿತ್ತು. ಅದರಲ್ಲಿ ಕೆಲವೇ ಮಂದಿಗೆ ಅತಿ ಹೆಚ್ಚು ಅಧಿಕಾರ ದೊರಕಿತ್ತು. ಇದೇ ಕಾರಣಕ್ಕಾಗಿಯೇ ಇಪ್ಪತ್ತೊಂದನೇ ಶತಮಾನದ ಅಮೆರಿಕನ್ ಶೈಲಿಯ ಮಾರ್ಕೆಟ್ ಕ್ಯಾಪಿಟಲಿಸಂ ಸಹ ಸೋಲುತ್ತದೆ. ಈ ಎರಡೂ ಮಹಾಸೌಧಗಳು ಮಾನವನ ಬುದ್ಧಿಮತ್ತೆಯಿಂದ ನಿರ್ಮಿತವಾದರೂ ಮಾನವನ ಗುಣಗಳಿಂದಾಗಿ ಕುಸಿವಂತಾಗುತ್ತದೆ.

'ಸಮಯ ಬಂದಿದೆ. ಬಹುಶಃ ಜಗತ್ತು ಇನ್ನೂ ಕೆಡುಕಾಗಿ ನಂತರ ಉತ್ತಮವಾಗಬಹುದು'. ಬಹುಶಃ ಮೇಲೆ ಸ್ವರ್ಗದಲ್ಲಿ ನಮಗಾಗಿ ಸಿದ್ಧವಾಗುತ್ತಿರುವ ಪುಟ್ಟ ದೇವತೆಯಿರಬಹುದು. ಮತ್ತೊಂದು ಹೊಸ ಪ್ರಪಂಚ ನಮಗೆ ದೊರಕುವುದಷ್ಟೇ ಅಲ್ಲ, ಅದು ಈಗಾಗಲೇ ತಯಾರಾಗುತ್ತಿರಬಹುದು. ಆಕೆ ಬಂದಾಗ ಸ್ವಾಗತಿಸಲು ನಮ್ಮಲ್ಲಿ ಬಹಳಷ್ಟು ಮಂದಿ ಇಲ್ಲದೇ ಇರಬಹುದು. ಆದರೂ ದಿನದ ಪ್ರಶಾಂತತೆಯಲ್ಲಿ ನಾನು ಕಿವಿಕೊಟ್ಟು ಆಲಿಸಿದಾಗ ಆಕೆ ಉಸಿರಾಡುತ್ತಿರುವುದನ್ನು ಕೇಳಬಲ್ಲೆ.

●

---

ಜೆ. ಬಾಲಕೃಷ್ಣ ಸಹಾಯಕ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ವಿಭಾಗ
ಕೃಷಿ ವಿಶ್ವವಿದ್ಯಾಲಯ, ಹೆಬ್ಬಾಳ, ಬೆಂಗಳೂರು-೫೬೦೦೨೪

# ಬರ್ಕ್‌ವೈಟ್ ಕಂಡ ಭಾರತ

**ಕಾರಗಡಿ ಶಿವರಾಮ**

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯಾನಂತರ ಭಾರತದ ರಾಜಕೀಯ ವ್ಯವಸ್ಥೆ ಮತ್ತು ಸಾಮಾಜಿಕ ಪರಿಸ್ಥಿತಿಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಹಿಡಿದಿಟ್ಟ ಸತ್ಯಾನ್ವೇಷಣೆಯ ಕೃತಿ "ಬರ್ಕ್‌ವೈಟ್ ಕಂಡ ಭಾರತ". ೧೯೪೭-೪೮ ರಲ್ಲಿನ ಭಾರತದ ರಾಜಕೀಯ ದೊಂಬರಾಟ ದೇಶ ವಿಭಜನೆ, ಹಿಂದೂ-ಮುಸ್ಲಿಂ ನಡುವಿನ ವಿದ್ವೇಷವನ್ನು ಅಮೆರಿಕದ 'ಲೈಫ್'ಪತ್ರಿಕೆಯ ಛಾಯಾಚಿತ್ರಗಾರ್ತಿ ಮತ್ತು ಸಾಮಾಜಿಕ ಕಳಕಳಿಯ ಬರಹಗಾರ್ತಿ ಮಾರ್ಗರೆಟ್ ಬರ್ಕ್‌ವೈಟ್ ಚಿತ್ರಿಸಿದ್ದಾರೆ.

ಇಂಗ್ಲೀಷಿನ 'ಹಾಫ್‌ವೇ ಟು ಫ್ರೀಡಂ' ಕೃತಿಯ ಕನ್ನಡಾನುವಾದವನ್ನು ಡಾ.ಕೆ. ಸಂಧ್ಯಾರೆಡ್ಡಿ ಮಾಡಿದ್ದಾರೆ. ೧೯೪೭-೪೮ರ ಸುಮಾರಿಗೆ ಭಾರತದ ವಿವಿಧ ವರ್ಗಗಳ ಜನರನ್ನು ಸಂಪರ್ಕಿಸಿ ಅವರ ಆಶೋತ್ತರ, ಆಕಾಂಕ್ಷೆ, ಬವಣೆಗಳನ್ನು ಈಕೆ ಪ್ರತ್ಯಕ್ಷವಾಗಿ ಅರಿತವಳು. ಸ್ವಾತಂತ್ರ್ಯದ ಕನಸು ಕಾಣುತ್ತಿದ್ದ ಭಾರತೀಯರ ತಳಮಳ, ವೇದನೆಗಳನ್ನು ಆ ಕಾಲದ ಭಾರತದ ಸಾಂಸ್ಕೃತಿಕ ಸ್ಥಿತಿಗಳನ್ನು ಅತ್ಯಂತ ಸಹಜವಾಗಿ ಮತ್ತು ಆಕರ್ಷಕವಾಗಿ ಬರ್ಕ್‌ವೈಟ್ ದಾಖಲಿಸಿದ್ದಾರೆ.

ಮಾರ್ಗರೆಟ್ ಬರ್ಕ್‌ವೈಟ್ ಗಾಂಧಿಯನ್ನು ಕೊನೆಯದಾಗಿ ಸಂದರ್ಶಿಸಿದ ವಿದೇಶಿ ವ್ಯಕ್ತಿ. ಅವರ ಸಂದರ್ಶನದ ಮೂಲಕ ಅದಕ್ಕೂ ಹಿಂದೆ ಯಾರೂ ತಿಳಿಯಲಾಗದಿದ್ದ ಗಾಂಧಿಯ ಕನಸುಗಳು ಇಲ್ಲಿ ಬಹಿರಂಗಗೊಂಡಿವೆ. ವಿಶೇಷವೇನೆಂದರೆ ಗಾಂಧೀಜಿಯ ಹತ್ಯೆಯಾದಂದೇ ಬರ್ಕ್‌ವೈಟ್‌ಳದ್ದು (ಜನವರಿ ३೦, ೧೯೪೮) ಭಾರತ ವಾಸ್ತವ್ಯದ ಕಡೇದಿನ. ಗಾಂಧಿ ಆಗಷ್ಟೇ ತಮ್ಮ ೧೬ನೇ ಉಪವಾಸದಿಂದ ಬಳಲಿದ್ದರು. ಆಗ ನಡೆದ ಸಂದರ್ಶನವಿದು. ಗಾಂಧಿ ಕನಸಿನ 'ಟ್ರಸ್ಟಿಶಿಪ್' ಬಗ್ಗೆ ಕೇಳಿದ ಪ್ರಶ್ನೆಗೆ, ಗಾಂಧೀಜಿ ಈಗ ಭಾರತದಲ್ಲಿ ಅಂತಹ ಟ್ರಸ್ಟಿಶಿಪ್‌ಗೆ ಅರ್ಹ ವ್ಯಕ್ತಿಗಳು ಯಾರೂ ಇಲ್ಲವೆಂದದ್ದು ಭಾರತದ ಭವಿಷ್ಯವನ್ನು ಆಗಲೇ ತೋರಿಸುವಂತಿತ್ತು. ಅಣುಬಾಂಬ್ ಕುರಿತ ಬರ್ಕ್‌ವೈಟ್ ಪ್ರಶ್ನೆಗೆ "ಅಣುಬಾಂಬನ್ನು ಕೂಡ ಅಹಿಂಸಾತ್ಮಕ ಪ್ರಾರ್ಥನಾಕ್ರಿಯೆ (Prayerful Action) ಯಿಂದಲೇ ಎದುರಿಸುತ್ತೇನೆ ಎಂದಿದ್ದಾರೆ ಗಾಂಧೀಜಿ. ಸಂದರ್ಶನ ನಡೆಸಿ ಹೊರ ನಡೆದ

ಕೆಲವೇ ಗಂಟೆಗಳಲ್ಲಿ ಗಾಂಧೀಜಿಯ ಹತ್ಯೆಯಾಯಿತು ಎಂದು ವಿಷಾದದಿಂದ ಬರ್ಕ್‌ವೈಟ್ ಬರೆಯುತ್ತಾರೆ. ಹಾಗೆಯೆ "ಇದು ಯಾರೋ ಒಬ್ಬ ಮಾಡಿದ ಕೃತ್ಯವಲ್ಲ; ಮುಖಹೀನ ಶಕ್ತಿಯೊಂದು ಈ ಕೃತ್ಯ ಮಾಡಿತ್ತು" ಎಂಬ ಜನತೆಯ ಅಭಿಪ್ರಾಯವನ್ನು ದಾಖಲಿಸುತ್ತಾರೆ. ವಿಷಾದವೆಂದರೆ ಭಾರತದ ಉಕ್ಕಿನ ಮನುಷ್ಯ ಸರ್ದಾರ್‌ಪಟೇಲ್, ಗಾಂಧಿ ಹತ್ಯೆ ನಂತರ "ಆರ್ ಎಸ್ ಎಸ್ ಯುವಕರಲ್ಲಿ ಕಂಡು ಬರುತ್ತಿರುವ ಮತೀಯ ಭಾವನೆ ಕೇವಲ ತಾತ್ಕಾಲಿಕ" (ಪು-೧೬೬) ಎಂದದ್ದು ಈಗ ಆ ಮತೀಯ ಶಕ್ತಿಗಳೇ ಭಾರತದ ಚುಕ್ಕಾಣಿ ಹಿಡಿದಿರುವುದಂತೂ ಈ ನೆಲದ ದುರಾದೃಷ್ಟ.

ಹದಿನಾರು ಲೇಖನಗಳಿರುವ ಈ ಕೃತಿಯಲ್ಲಿ ಭಾರತ ವಿಭಜನೆಯನ್ನು ಕುರಿತು ಬರ್ಕ್‌ವೈಟ್ ಹೀಗೆ ಹೇಳುತ್ತಾರೆ: "ದೇಶವನ್ನು ಎರಡು ಹೋಳು ಮಾಡಿದ್ದ ರಾಜಕೀಯ ಒತ್ತಡಗಳು ಎಷ್ಟರ ಮಟ್ಟಿಗೆ ಮತೀಯ ದ್ವೇಷವನ್ನು ಕೆರಳಿಸಿದ್ದವೆಂದರೆ ಜನರ ಆಲೋಚನಾ ವಿಧಾನವೇ ಬದಲಾಗಿತ್ತು; ತಮ್ಮ ಧರ್ಮಕ್ಕೆ ಸೇರಿಲ್ಲದ ಯಾವುದೇ ಜನರೂ ಲೂಟಿ ಸುಲಿಗೆ ಕೊಲೆಗೆ ಬಲಿಯಾಗುತ್ತಿದ್ದರು." ನಮ್ಮ ರಾಜಕೀಯ ವ್ಯವಸ್ಥೆ, ಪ್ರತಿಷ್ಠೆ ಹಾಗೂ ಧರ್ಮದ ಹಿನ್ನೆಲೆಯಲ್ಲಿ ವಿಭಜನೆ ಆದದ್ದನ್ನು ಬರ್ಕ್‌ವೈಟ್ ಖಂಡನಾರ್ಹವಾಗಿ ದಾಖಲಿಸುತ್ತಾರೆ. ಬರ್ಕ್‌ವೈಟ್ ನಮ್ಮಲ್ಲಿನ ಧಾರ್ಮಿಕ ಮೂಲಭೂತವಾದ ಮತ್ತು ಆ ಮೂಲಕ ನಡೆಯುವ ಸಂಘರ್ಷ ಕುರಿತು "ಮುಸ್ಲಿಮರಂತೆ ಸಿಖ್ಖರು ಕೂಡ ಏಕದೇವೋಪಾಸಕರು. ಹಿಂದೂಗಳಂತೆ ನೂರಾರು ದೇವರುಗಳನ್ನು ಪೂಜಿಸುವವರಲ್ಲ. ಹೀಗಿದ್ದೂ ಹಿಂದೂ-ಮುಸ್ಲಿಮರಿಬ್ಬರೇ ಯಾಕೆ ಬದ್ಧ ವೈರಿಗಳಂತೆ ಸೆಣಸಾಡಿದರು ಎಂಬುದು ಅರ್ಥವಾಗದ ಸಂಗತಿ. ಈ ಕಾರಣದಿಂದಲೇ ನನಗೆ ಈ ಧಾರ್ಮಿಕ ಯುದ್ಧಗಳೆಲ್ಲ ನಿಜಕ್ಕೂ ಧಾರ್ಮಿಕ ಕಾರಣಕ್ಕಾಗೇ ನಡೆಯುತ್ತಿವೆಯೇ  ಎಂಬ ಪ್ರಶ್ನೆ ಕಾಡತೊಡಗಿತ್ತು. ಬಹುಶಃ ಇವರೆಲ್ಲ ಧರ್ಮದ ಸೋಗಿನಲ್ಲಿ ಇನ್ಯಾವುದೋ ಉದ್ದೇಶಕ್ಕೆ ಹೋರಾಡುತ್ತಿದ್ದರು ಎನ್ನಿಸಿತು"ಎಂದು ವಿಷಾದಿಸುತ್ತಾರೆ. ಭಾರತ ವಿಭಜನೆಯ ಬಗ್ಗೆ ಬರ್ಕ್‌ವೈಟ್ ಎಷ್ಟು ವಿರೋಧಿಯಾಗಿದ್ದರೆಂದರೆ "ಅಂತಿಮವಾಗಿ ಸ್ವತಂತ್ರಗೊಂಡ ಒಂದು ಏಕೀಕೃತರಾಷ್ಟ್ರದ ಬದಲಿಗೆ ಅಂಗವಿಕಲವಾದ ಅವಳಿ-ಜವಳಿಗಳು ಹುಟ್ಟಿದ್ದವು" (ಪು-೧೦) ಎಂದು ಬರೆಯುತ್ತಾರೆ.

ಭಾರತದಲ್ಲಿನ ಹಸಿವು,ಬಡತನ, ನಿರುದ್ಯೋಗ ಆ ಮಧ್ಯೆ ಬ್ರಿಟಿಷರ ಆಳ್ವಿಕೆಯ ಕಠಿಣತೆ ಜನತೆಯನ್ನು ಭೀಕರ ಸಾಮಾಜಿಕ ಸನ್ನಿವೇಶಗಳಿಗೆ ದೂಡಿತ್ತು. ಪ್ರಗತಿಪರ ಹೋರಾಟಗಾರರು ಕೂಡ ಬಂಡವಾಳ ಶಾಹಿಗಳ ಪರವಾಗಿದ್ದು ಕೊಂಡೆ ಬಡತನ ನಿವಾರಣೆಯ ಮಾತನಾಡುತ್ತಿದ್ದರು. ಭೂಮಾಲಿಕರು, ರಾಜಮಹಾರಾಜರು, ನಿಜಾಮರು ಹೋರಾಟಗಾರರನ್ನು ಸದಾ ಎಚ್ಚರಿಕೆಯಿಂದ ಗಮನಿಸುತ್ತಿದ್ದರು. ಇಂತಹ ಸಂದಿಗ್ಧ ಸ್ಥಿತಿಯಲ್ಲಿ ಗಾಂಧೀಜಿ ಕೇವಲ ಉಪವಾಸದ ಮೂಲಕ ಅದನ್ನು ಪರಿಹರಿಸುವ ಕ್ರಮದ ಕುರಿತು ಬರ್ಕ್‌ವೈಟ್ ಕುತೂಹಲದಿಂದ ಬರೆಯುತ್ತಾರೆ. ಸ್ವಾತಂತ್ರ್ಯನಂತರದ ಭಾರತವನ್ನು ಅವಲೋಕಿಸಿದಾಗ  ಬರ್ಕ್‌ವೈಟ್‌ಳ ಆಲೋಚನೆಗಳೇ ಸರಿ ಎನಿಸುತ್ತದೆ. ಆಕೆ ನುಡಿದಿದ್ದಳು: "ಭಾರತದ ಫ್ಯೂಡಲಿಸ್ಟ್ ಶಕ್ತಿಗಳ ವಿರುದ್ಧ ದೃಢಕ್ರಮ ಕೈಗೊಳ್ಳಲು ವಿಫಲವಾದದ್ದೆ ಭಾರತದ ನೇತಾರರ ದೊಡ್ಡ ದೌರ್ಬಲ್ಯ" (ಪು. ೧೩). ಇದು ಈಗ ಹೆಚ್ಚು ಸತ್ಯವಾಗಿದೆ.

ಆಗಲೇ ಮತೀಯ ಭಾವನೆ ಮತ್ತು ಹಿಂದೂ ಮಹಾಸಮಾಜ, ಆರ್.ಎಸ್.ಎಸ್.

ಸಂಘಟನೆಗಳು ಊರ್ಜಿತಗೊಳ್ಳುತ್ತಿದ್ದವು. ಆ ಕುರಿತು "ಮುಸ್ಲಿಂರನ್ನು ಹಿಂದೂರಾಷ್ಟ್ರದ ಸಂಪೂರ್ಣ ಅಧೀನದಲ್ಲಿರುವ ವಿದೇಶೀಯರು ಎಂದು ಪರಿಗಣಿಸಬೇಕು ಎಂಬ ಆರ್‌ಎಸ್‌ಎಸ್ ನಿಲುವು - ಪಶ್ಚಿಮದ ಫ್ಯಾಸಿಸ್ಟ್ ಸರ್ವಾಧಿಕಾರಿ ಧೋರಣೆಯಾಗಿತ್ತು" ಎಂದು ಛೇಡಿಸುತ್ತಾರೆ. ಕೇವಲ ಅತಾರ್ಕಿಕ ನೆಲೆಗಟ್ಟಿನಿಂದ ಯಾವ ವಿಚಾರವನ್ನೂ ಬರ್ಕ್‌ವೈಟ್ ದಾಖಲಿಸುತ್ತಿರಲಿಲ್ಲ. ಅಂತೆಯೇ ಯಾರೊಬ್ಬರ ಕುರಿತು ಪೂರ್ವ ನಿರ್ಧಾರಿತ, ಗೃಹೀತ ನಿಲುವುಗಳಿಲ್ಲದೇ ವ್ಯಾಖ್ಯಾನಿಸಿದ್ದು ಅವರ ಬರವಣಿಗೆಯ ವಿಶೇಷ. ಬರ್ಕ್‌ವೈಟ್ -"ಗಾಂಧೀಜಿ ಬಿರ್ಲಾ ಎಂಬ ಶ್ರೀಮಂತನ ಮನೆಯಲ್ಲಿ (ಬಿರ್ಲಾನಭವನ) ವಾಸವಾಗಿರುವುದೇಕೆ?" ಎಂಬ ಕುತೂಹಲಕಾರಿ ಪ್ರಶ್ನೆಯನ್ನು ಕೇಳುತ್ತಾರೆ. ನಂತರ ಅವರೇ ಗಾಂಧೀಜಿಯವರಲ್ಲಿ ಆ ಕುರಿತು ವಿವರಣೆ ಕೇಳಿದ ಪ್ರಸಂಗವೂ ದಾಖಲಾಗಿದೆ. ಬರ್ಕ್‌ವೈಟ್ ಜನಸಾಮಾನ್ಯ ದೃಷ್ಟಿಗನುಸಾರವಾಗಿ ಆಗಿನ ಪ್ರಧಾನಿ ನೆಹರುರನ್ನು ಎಡಪಂಥೀಯರೊಂದಿಗೆ(?) ಪಟೇಲರನ್ನು ಶ್ರೀಮಂತರೊಂದಿಗೆ ಸಮೀಕರಿಸಿ ವಿಶ್ಲೇಷಿಸುತ್ತಾರೆ. ಪಟೇಲರು ಹಿಂದೂ ಸಂಘಟನೆಗಳ ಬಗ್ಗೆ ಮೃದು ಧೋರಣೆ ತಾಳಿದ್ದು, ಬಿರ್ಲಾ, ಟಾಟಾ ಅಂತಹವರ ಜತೆ ಹೆಚ್ಚು ಸಂಪರ್ಕದಲ್ಲಿರುತ್ತಿದ್ದರೆಂಬ ಬಗ್ಗೆಯೂ ಬರ್ಕ್‌ವೈಟ್ ಗಮನ ಸೆಳೆಯುತ್ತಾರೆ.

ಹಿಂದೂ, ಮುಸ್ಲಿಂ ಏಕತೆಗಾಗಿ ಅಂದಿಗಾಗಲೇ ಹೋರಾಡಿದ ಮೀರ್‌ಮುಖಬುಲ್ ಶರ್ವಾನಿಯವರ ತ್ಯಾಗವನ್ನು ಕುರಿತೂ ಬರೆಯುತ್ತಾರೆ.

ಎರಡು ವರ್ಷಗಳಲ್ಲಿ ಭಾರತದ ವಿವಿಧ ಭಾಗಗಳಲ್ಲಿ ತಿರುಗಾಡಿದ ಆಕೆ ಇಲ್ಲಿನ ಸ್ಥಿತಿಗತಿಯನ್ನು ವಸ್ತುನಿಷ್ಠವಾಗಿ ದಾಖಲಿಸಿದ್ದಾಳೆ. ಅವಳ ಕಳಕಳಿ ಮತ್ತು ಮಾನವೀಯ ವರದಿಗಾರಿಕೆ, ಸದ್ಯದ ಕೋಮು ವಿದ್ವೇಷದ ಹಿಂದಿನ ಚರಿತ್ರಾತ್ಮಕ ಕಾರಣಗಳನ್ನು ಒದಗಿಸಬಲ್ಲುದು.

ಇವತ್ತಿನ ಯುವ ಪೀಳಿಗೆಗೆ ಬರ್ಕ್‌ವೈಟ್‌ಳ ಮನಸ್ಸು, ಸಹಜ ಮಾನವೀಯ ತತ್ವ ಹಾಗೂ ಸತ್ಯಶೋಧನೆಯ ನಿಷ್ಠುರ ಛಲದ ಅಗತ್ಯ ಎಷ್ಟಾದರೂ ಇದೆ. ●

---

ಕಾರಗಡಿ ಶಿವರಾಮ, ಹೊಸನಗರ, ಹನಿಯ (ಅಂಚೆ)
ಹೊಸನಗರ (ತಾ) ಶಿವಮೊಗ್ಗ(ಜಿ) -೫೭೭೪೧೮.

# ಗುನ್ನಾರ್ ಎಕ್ಲೋಫನ ಕವಿತೆಗಳು

ಅನು : ಆರ್. ವಿಜಯರಾಘವನ್.

## ಎತ್ತರವ ಬಣ್ಣಿಸುವೆನೆ..........

ಎತ್ತರವ ಬಣ್ಣಿಸುವೆನೆ
ನೀಲಿಯನ್ನು ಆಯ್ದುಕೊಳ್ಳುವೆ
ಮತ್ತೆ ಎರಡು ಚಿನ್ನದ ಬಣ್ಣದ ಮಚ್ಚೆ
ತಲೆಯಲ್ಲಿ ಒಂದು ನಕ್ಷತ್ರ
ಪಾದದಲ್ಲಿ ಒಂದು ನಕ್ಷತ್ರ
ಪಾದದ ಅಡಿಯಲ್ಲಿ ಒಂದು ದರ್ಪಣ ಬಿಂಬ
ನಕ್ಷತ್ರದಲ್ಲಿ ಕೊನೆಯಾಗುವುದು

ಅಗಲವ ಬಣ್ಣಿಸುವೆನೆ
ಅಪ್ಪುಗೆಯ ಆಯ್ದುಕೊಳ್ಳುವೆ
ಏಕೆಂದರೆ ನನ್ನಲ್ಲಿ ಸಂವೇದನೆಗಳಿವೆ
ಆದಿಮ ಹಾಗೂ ಅಸತ್ಯವಾದವು
ನಿಜದ ಅಸ್ತಿತ್ವವನ್ನು ಗ್ರಹಿಸಪಾರೆ

ನಿನ್ನ ತಲೆಯಿರುವೆಡೆಯಲ್ಲಿ ತಾರೆಗಳಿಲ್ಲ
ನಿನ್ನ ಪಾದ ಊರಿರುವಲ್ಲಿ
ಕೇಂದ್ರ ಬಿಂದುವಿಲ್ಲ

ಆದರೆ ನಿನ್ನ ಒಲುಮೆಯ
ಒಂದಿಷ್ಟನ್ನು ನಾನು ಬಲ್ಲೆ.

## ನಿನ್ನ ನೆರಳು, ಫಾತಿಮಾ........

ಫಾತಿಮಾ
ಬಹುಕಾಲ ನಿನ್ನ ನೆರಳನ್ನು ಗಮನಿಸಿದ್ದೆ
ಸೂರ್ಯ ಹೊಳೆದ ದಿನಗಳಲ್ಲಿ
ಬೆಳದಿಂಗಳ ಇರುಳುಗಳಲ್ಲಿ
ಆ ನೆರಳೆಷ್ಟು ಕಪ್ಪಗಿತ್ತೆಂದರೆ, ಫಾತಿಮಾ
ಸುತ್ತಲಿನ ಗೋಡೆ ಅದರ ಸುತ್ತಲು
ಕವಚವೊಂದರ ಹಾಗೆ ಹೊಳೆವ ಮೋಸದ ಬೆಳ್ಳಿಗೆರೆ ಬರೆದಿತ್ತು

ಸನಿಹವಾದೆನೋ, ದೂರಸರಿದೆನೋ ಅಂತೂ
ನನ್ನದೇ ಒಂದು ನೆರಳಿಂದ ಅಳಿಸಿಹಾಕಲು
ಯತ್ನಿಸಿದ ಹಾಗೆಲ್ಲ ನೀನು ದೃಷ್ಟಿಗೋಚರವಾಗಿಯೇ ಉಳಿದೆ
ನಿನ್ನ ಸುತ್ತಲಿನ ಬೆಳ್ಳಿಗೆರೆ ಸ್ವಲ್ಪವೂ ಮಾಸದೆ

ಕತ್ತಲೆಯೇ, ಬೆಳಕಿನವಳಿಯೇ
ನಿನ್ನ ಸುತ್ತಲೂ ಸುತ್ತುವುದು ಕಲಿತೆ
ಸುತ್ತಲೂ ಸುತ್ತುತ್ತಾ
ಕೋನ ಕೋನಗಳಿಂದ ನಿನ್ನ ಹೆಣ್ಣೆಂದು
ಭಾವಿಸಿಕೊಳ್ಳುತ್ತ

ನಿನ್ನ ಕಪ್ಪಾಗಿಸಿದ ಆ ಬೆಳಕು
ನಿನಗೆ ಹೊಳೆವಂಚು ಕೊಟ್ಟ ಆ ಬೆಳ್ಳಿ
ಆ ಬೆಳಕೆಲ್ಲ ನನ್ನಲ್ಲೆ ಇತ್ತು ಪ್ರೇಮವಾಗಿ
ನನ್ನ ಪ್ರೇಮವಾಗಿ ಅಲ್ಲ, ಖಂಡಿತ
ನನ್ನೊಳಗಿಂದ ನೇರ ಬೆಳಗುತ್ತಿದ್ದರು ಸೂರ್ಯಚಂದ್ರರು

ನನ್ನಾತ್ಮಕ್ಕೆ ಗುಣವನ್ನೂ, ಸತ್ವವನ್ನೂ
ತಂದುಕೊಟ್ಟದ್ದು ಮಾತ್ರ ನಿನ್ನ ನೆರಳೇ.

## ಎಲ್ಲ ಪಾರಿವಾಳಗಳೂ ಸಾಮಾನ್ಯವಾದವು ಅಲ್ಲ

ಸರಳುಗಳಲ್ಲಿ ದೂರಿ ಹಾರಿಬಂತೊಂದು ಹಕ್ಕಿಯ ಗರಿ
ಗಾಳಿ ಹೊತ್ತು ತಂದಿತ್ತದನ್ನು
ಅಥವಾ ಯಾರೋ ತಂದು ಹಾಕಿದ್ದಾರು
ನೆಲದ ಮೇಲೇ ಅದು ದೀರ್ಘ ಕಾಲ ಬಿದ್ದಿತ್ತು

ನಾನದನ್ನು ಕೈಗೆತ್ತಿಕೊಳ್ಳುವ ಮೊದಲು
ಒಂದು ಸಾಮಾನ್ಯ ಪಾರಿವಾಳದ ಗರಿಯದು.
ನಾನೀಗ ನಿಮಗೆ ಖೈದಿಯೊಬ್ಬನ ಗುಟ್ಟನ್ನು ಹೇಳುತ್ತೇನೆ:
ಎಲ್ಲ ಪಾರಿವಾಳಗಳೂ ಸಾಮಾನ್ಯವಾದವು ಅಲ್ಲ.

## ನನ್ನ ವಧಕಾರನೇ.......

ನನ್ನ ವಧಕಾರ ನನ್ನ ರಕ್ತ ಹರಿಸಿದ
ನನಗೇನೂ ಅನ್ನಿಸಲಿಲ್ಲ
ನಾಚಿಕೆಗೆಟ್ಟು ಅತ್ಯಾಚಾರ ಮಾಡಿದ
ನನ್ನ ಲಿಂಗವ
ಅದರ ಮೂರರಷ್ಟುದ್ದ ಎಳೆದು - ಅದರಿಂದ
ಮೂರೆಳೆಯ ತೊಗಲಿನ ಚೀರಾಟದ ಹಗ್ಗ ಹೊಸೆದ
ಹೇ ವಧಕಾರನೇ, ನನ್ನ ಕಾಮ
ನನ್ನ ತೊಡೆಗಳ ನಡುವೆ ಇಲ್ಲ
ಕಪೋಲಕಲ್ಪಿತ ಹೆಸರುಗಳ ದಿಕ್ಕು ತಪ್ಪಿಸಿದ
ನನ್ನ ಸಂವೇದನೆ ನನ್ನ ಇಂದ್ರಿಯಗಳಲ್ಲಿಲ್ಲ
ಹೇ ವಧಕಾರನೇ
ಅದು ನನ್ನ ಎದೆಯಲ್ಲಿದೆ
ಇರಿ, ಇನ್ನಷ್ಟು ಆಳವಾಗಿ, ತಿರಿಚು
ನಿನಗರ್ಥವಾಗುವುದು ಕೊನೆಗೆ
ತನ್ನೆಲ್ಲ ವಂಚನೆಯನ್ನು ಅದು ಬಿಟ್ಟೋಡಿದೆ ಎಂದು.
ನನ್ನ ಹೃದಯವೋ ನನ್ನ ಹೃದಯದಲ್ಲಿರಲಿಲ್ಲ
ಅದು ರೆಕ್ಕೆ ಬೆಳೆಸಿಕೊಂಡಿತ್ತು.

## ಆರು ರೆಕ್ಕೆಗಳ ಪ್ರಾಣಿ

ಕಪ್ಪು ಬಿಳಿ ಗರಿಗಳುಳ್ಳ
ಆರು ರೆಕ್ಕೆಗಳ ಪ್ರಾಣಿ
ದ್ವಿಲಿಂಗಿ
ನಿಗೂಢ ಮುಖ
ಉದ್ದೇಶಿತವಾಗಿ ನಿನ್ನನ್ನೇ ನೋಡುತ್ತಿತ್ತು.
ಇದು ನಿನಗೆ ತೋರಿ ಬಂದಿದ್ದು

ನನ್ನ ಕಣ್ಣ ಬೆಳಕಿನಲ್ಲಿ ಕೆಂಪಗೆ ಕಾದ ಸೂಜಿಗಳು ಚುಚ್ಚಿದ
ಮಹಾಸ್ಫೋಟದಿಂದ ಹುಟ್ಟಿದ್ದು
ಮುಚ್ಚಿದ್ದ ನೋವು ತುಂಬಿದ ಎವೆಯನ್ನು
ನಂತರ ಮುದ್ದಿಸಿದ್ದು.

ಯಾರೂ ಅಲ್ಲದವನೊಬ್ಬ
ನನಗೆ ಗೊತ್ತು. ಮಗಳೊಬ್ಬಳು
ಸ್ಮಿರ್ನಾ, ಮಾನಿಸಾ, ಸಾರ್ಡ್ಸ್, ಕೋನಿಯಾ ಮತ್ತು
ಪರ್ವತಗಳ ಮೇಲೆ, ಪ್ರಾಟ್, ಮತ್ತೊಮ್ಮೆ
ಪರ್ವತಗಳ ಮೇಲೆ

ಹೀಗೆ ನಾವು ಹಿಡಿದ ದಾರಿಯಲ್ಲಿ-
ನಾನು ನೋಡಲಾರದ ಹುಲ್ಲುಗಾವಲುಗಳು
ಕಣ್ಣುಗಳು ಕೀಳಲ್ಪಟ್ಟ ಈ ಕುರುಡನಿಗೆ
ದಾರಿ ತೋರುವ ಕುರುಡ

ನಾನು ಮಗಳೆಂದು ಕರೆವ ಆ ಅವಳು
ದಾರಿ ತೋರುತ್ತಾಳೆ ನೋಡುತ್ತಿರುವ ಆ ಕುರುಡನಿಗೆ.

## ಶೂನ್ಯದಿಂದುದುರಿದ ಆರು ಹೂಗಳು

೧.

ನನ್ನ ಕೋಣೆಯಲ್ಲಿ, ರಾತ್ರಿಯಲ್ಲಿ
ಸಮುದ್ರವೇ ಹಿಂಬಾಲಿಸಿ ಬಂದಂತೆ
ಬಂದು ತನ್ನ ಬಾಹುಗಳನ್ನು
ನನ್ನ ಸುತ್ತಲು ಚಾಚಿದಂತೆ
ತನ್ನ ಶಬ್ದದ ಬಾಹುಗಳನ್ನು
ಸಮುದ್ರ ನನ್ನ ಸುತ್ತಲು
ಕವಿಸಿದಂತೆ ಬಿಗಿಮುಷ್ಠಿಯಲ್ಲಿ

ಸಮುದ್ರ ನನ್ನ ಹಿಡಿದುಕೊಳ್ಳುತ್ತದೆ
ಸಮುದ್ರ ನನ್ನ ಅಪ್ಪಿಕೊಳ್ಳುತ್ತದೆ.

೨.

ಕನಸಿನಲ್ಲಿ ಒಂದು ಧ್ವನಿಯ ಕೇಳಿದೆ:
ಹಬೀಬ್, ನಿನಗೆ ಈ ಈರುಳ್ಳಿ ಬೇಕೋ
ಅಥವಾ ಇದರ ಒಂದು ತುಂಡೋ?
ಕೇಳಿದ್ದೇ ಕಳವಳಿಸಿ ಹೋದೆ

ಈ ಗೂಢ ಪ್ರಶ್ನೆಯೇ
ನನ್ನ ಬದುಕಿನ ಪ್ರಶ್ನೆಯೂ ಹೌದು.
ನಾನು ಇಡಿಯ ಬದಲು ತುಂಡನ್ನು ಬಯಸುತ್ತಿರುವೆನೆ
ಅಥವಾ ತುಂಡಿನ ಬದಲು ಇಡಿಯನ್ನು?

ಇಲ್ಲ. ನನಗೆ ಎರಡೂ ಬೇಕು
ಇಡಿಯ ತುಂಡು ಹಾಗೂ ಇಡಿ ಇಡೀ
ಈ ಆಯ್ಕೆ ಯಾವುದೇ ವಿರೋಧಾಭಾಸವ
ಒಳಗೊಂಡಿರುವುದಿಲ್ಲ.

೩.

ಶೂ ಲೇಸುಗಳನ್ನು ಮಾರುವವನೊಬ್ಬ
ಬಜಾರಿನ ಇಕ್ಕಟ್ಟಾದ ಓಣಿಯಲ್ಲಿ ನನಗೆ ಸಿಕ್ಕಿದ
ನನಗೆ ಲೇಸುಗಳನ್ನು ಮಾರಲು ಬಯಸಿದ್ದ
ಆದರೆ ನನ್ನ ಬಳಿ ಶೂಗಳೇ ಇಲ್ಲ
ಕೆಂಪು ಲೇಸುಗಳು, ಕಪ್ಪು ಲೇಸುಗಳು
ಹತ್ತಿಯ, ರೇಶಿಮೆಯ ಲೇಸುಗಳು
ಅವನು ನಾನು ಬರಿಗಾಲಲ್ಲಿರುವುದನ್ನು
ಗಮನಿಸಲೇ ಇಲ್ಲ
ಅವನು ಕುರುಡನೋ, ಹುಚ್ಚನೋ ಆಗಿರಬೇಕು
ಅಥವಾ ಪ್ರಾಯಶಃ ವಿವೇಕಿಯಾಗಿದ್ದಾನು

ನಾವು ಪರಸ್ಪರ ಅಭಿನಂದಿಸಿದೆವು
ಅದೇ 'ನಿಮಗೆ ಗೊತ್ತಲ್ಲ' ಎಂಬ ಸಂಕೇತದೊಡನೆ
ಆಮೇಲೆ ಇಬ್ಬರೂ ನಕ್ಕೆವು.

೪.

ಅಮ್ಮಾ, ನನ್ನನ್ನ ನೀನು ಯಾವುದಕ್ಕೆ ಮಾರಿದೆ ಎಂದು ನಾಬಲ್ಲೆ
ಸಾವೆಂಬ ಎತ್ತರದ ಅಗಸೆಗೆ
ಆ ಕನ್ನಡಿಗಳ ವಿಶ್ವದಲ್ಲಿ
ನಾನು ನನ್ನನ್ನೇ ಸಂಧಿಸುತ್ತೇನೆ
ನನ್ನ ಮಗುವಾಗಿ
ನೀನು ನನಗೆ ಮುದ್ದಾಗಿ ಕಲಿಸಿದ ಹಾಡುಗಳ ಜೊತೆಯಲ್ಲಿ
ಮೊಲೆಯೂಡಿಸುವ ದಾಯಿಯ
ಹಾಲಿನ ಜೊತೆಗಿರುವ ಬೆವರ ವಾಸನೆಯೊಂದಿಗೆ
ಅವಳಪ್ಪುಗೆಯಲ್ಲಿ ಸುರಕ್ಷಿತವಾಗಿ.

೫.

ಇಸ್ ಫಹಾನ್ ಬಜಾರಿನ ತರಾಜುಕಟ್ಟೆಯ ಮೇಲೆ
ಸಾವಿರದ ಒಂದು ದೇಹಗಳನ್ನು
ಸಾವಿರದ ಒಂದು ಆತ್ಮಗಳನ್ನು
ಗುಲಾಮರನ್ನಾಗಿ ಲಿಲಾವಿಗೆ ಇಡಲಾಗಿತ್ತು ಮತ್ತು
ಸಾವಿರದ ಒಂದು ವ್ಯಾಪಾರಿಗಳು
ಬೇರೆ ಬೇರೆ ಆತ್ಮಗಳಿಗೂ ದೇಹಗಳಿಗೂ
ಬೇರೆ ಬೇರೆ ಬೆಲೆ ಕೂಗಿದರು

ಆತ್ಮಗಳು ಹೆಂಗಸರಿನಂತೆ ಇದ್ದವು
ದೇಹಗಳು ಗಂಡಸರಿನಂತೆ ಇದ್ದವು
ವರ್ತಕ ಅದೃಷ್ಟಶಾಲಿ, ಹೇಗೋ
ಒಂದು ಆತ್ಮ, ಒಂದು ದೇಹವನ್ನು
ಕೊಳ್ಳುವುದರಲ್ಲಿ ಯಶಸ್ವಿಯಾದ
ಹೊಂದಿಕೊಳ್ಳುವ, ಕೂಡುವ
ಆ ದೇಹ, ಆ ಆತ್ಮವನ್ನು.

೬.

ನಿನಗಾಗಿ ಒಂದು ಗುಂಡನ್ನು ಎರಕ ಹೊಯ್ದಿದ್ದೇನೆ.
ನನ್ನದೆಯಲ್ಲಿರುವ ನಿನ್ನನ್ನು ಸುಟ್ಟು ಹಾಕುವುದಕ್ಕೆ
ಕಲ್ಲಿನಿಂದ ಅದನ್ನು ತಯಾರಿಸಲಾಗಿದೆ, ಆ
ಕಲ್ಲನ್ನು ಅಪರಾಧಿಗಳು ಅಗೆದು ತೆಗೆದಿದ್ದಾರೆ
ಅದು ಕಲ್ಲಿನಲ್ಲಿ ಅದ್ದಿದ ಸೀಸ
ಜೇನಿನಲ್ಲಿ ಅದ್ದಿದ ಕಬ್ಬಿಣ
ಅದು ಕಿತ್ತು ಕಿತ್ತು ತೆಗೆದ
ಒಂದು ಕಚ್ಚು ಕಚ್ಚಾದ ಚೂಪು ಅಂಚುಗಳ
ಅದಿರಿನ ತುಂಡು
ಗಾಯಗಳನ್ನು ಹೆಚ್ಚು ಮಾಡುವುದಕ್ಕೆ
ಪ್ರೀತಿಗಾಗಿ ಸಾಯುವುದು ಎಂದರೆ ಏನೆಂದು
ನಿನಗೆ ಅರ್ಥ ಮಾಡಿಸಲಿಕ್ಕೆ.

---

ಆರ್. ವಿಜಯರಾಘವನ್, ಸೀನಿಯರ್ ಮೇನೇಜರ್, ಕೋಲಾರ ಗ್ರಾಮೀಣ ಬ್ಯಾಂಕ್
ಪ್ರಧಾನ ಕಛೇರಿ, ಕೋಲಾರ-೫೬೩ ೧೦೧

# ಗೆದ್ದು ಸೋತಾಗ

ಮೂಲ : ಕ್ಯಾಸಿಯಸ್ ಕ್ಲೇ(ಮಹಮದ್ ಆಲಿ)
ಅನು : ಜ್ಞಾನಮೂರ್ತಿ ಎಸ್.

ಅಮೆರಿಕದ ಕೀರ್ತಿ ಎವೆರೆಸ್ಟಿಗೇರಿಸುವುದೆನ್ನ ಗುರಿ
ಅದಕೆಂದೆ ಸೆದೆಬಡಿದೆ ರಷ್ಯನ್ ಜಟ್ಟಿಯನು, ಪೋಲ್ ಎದುರಾಳಿಯನು
ಗೆದ್ದೆ ಸ್ವರ್ಣಪದಕ ನನ್ನೊಲವ ತಾಯ್ನೆಲಕೆ.
ಇಟಲಿಯನ್ನರೆಂದರು, "ನಮ್ಮವನಿದ್ದ ವೀರ ಕ್ಯಾಸಿಯಸ್; ನೀನವಗು ಮಿಗಿಲು"
"ಪ್ರೀತಿ ನಿನ್ನ ಹೆಸರೆಮಗೆ; ಮೆಚ್ಚಿದೆವು ನಿನ್ನಾಟವನು,
ನೋಡು ನೀ ಬಯಸಿದರೆ ಇಡಿಯ ರೋಮ್ ನಿನ್ನ ಮನೆ."
ಮನದುಂಬಿ ನಾನೆಂದೆ "ಆಭಾರಿ ನಾ ನಿಮ್ಮ ಆದರಾತಿಥ್ಯಕೆ
ಆದರೆ ತಾಯ್ನೆಲದ ಒಲವಿನ್ನು ನನ್ನೊಳಿದೆ
ಕಾದಿಹರಲ್ಲಿ ಸ್ವಾಗತಿಸಲೆನ್ನ ಲೂಯಿಸ್ ವಿಲ್ಲೆಯಲೆ."

ದೊರೆಯಿತೆಂತಹ ಸ್ವಾಗತ ಅಮೆರಿಕದೊಳವಗೆ ಗೊತ್ತೇನು?
ನಾಚಿ ಬೆಚ್ಚಿದ, ಕಾಡಿತು ಏಕಾಕಿತನ
ತವರು ಪಟ್ಟಣ ಲೂಯಿವಿಲ್ಲೆಯ ಭೋಜನಾಲಯದಲಿ ನಿರಾಕರಿಸಿದಾಗ
ಉಣಲಿಕ್ಕಲವಗೆ. ಯಾಕೆ?!
ಯಾಕೆಂದರವನೊಬ್ಬ 'ಕರಿಯ'. ಮತ್ತವನು ಮಾಡಿದ್ದೇನು?
ಗೆದ್ದ ಸ್ವರ್ಣ ಪದಕವನೆಸೆದ ಹರಿವ ನದಿಗೆ!

●

ಜ್ಞಾನಮೂರ್ತಿ ಎಸ್, s/o ಟಿ. ವಿ. ಶ್ರೀನಿವಾಸಮೂರ್ತಿ, ಯಲ್ಲಾಪುರ, ಹುಳ್ಳೇನಹಳ್ಳಿ ಅಂಚೆ
ತಿಪ್ಪಸಂದ್ರ ಹೋಬಳಿ, ಮಾಗಡಿ ತಾಲೂಕು - ೫೬೨ ೧೩೧, ಬೆಂಗಳೂರು ಗ್ರಾ. ಜಿಲ್ಲೆ.

# 'ಸರ್ಬ್' ಓರ್ವನ ಇರುಳು

ಸ್ಪೇನ್ ಮೂಲ : ವಿ.ಬಿ. ಇಬ್‌ನೆಸ್
ಅನು : ನೀಳಾದೇವಿ

ರಾತ್ರಿ ಹನ್ನೊಂದರ ವೇಳೆ. ಈ ಹೊತ್ತಿಗೆ ಪ್ಯಾರೀಸಿನ ಥಿಯೇಟರುಗಳು ಮುಚ್ಚಲ್ಪಡುತ್ತಿದ್ದವು. ಇದಕ್ಕಿಂತಾ ಒಂದರ್ಧ ಗಂಟೆ ಮುಂಚೆಯೇ ಅಲ್ಲಿನ ರೆಸ್ಟುರಾಂಟ್‌ಗಳು, ಕೆಫೆಗಳೂ ಗಿರಾಕಿಗಳನ್ನು ಬೀದಿಯ ಪಾಲು ಮಾಡಿರುತ್ತಿದ್ದವು. ನಮ್ಮ ಗುಂಪು ರಾಜಮಾರ್ಗದ ಅಂಚಿನಲ್ಲಿ ನಿಂತಿತ್ತು. ಮನೋರಂಜನೆ ಮುಗಿಸಿದವರು ಕಟ್ಟಡ, ಮರಗಳ ನೆರಳಲ್ಲಿ ಜಾರಿಕೊಳ್ಳುತ್ತಿರುವಾಗ ನಾವುಗಳು ರಾಜ ಮಾರ್ಗದ ಅಂಚಿನಲ್ಲಿ ಈಗೇನು ಮಾಡುವುದು ಎಂದು ತಳಮಳಿಸುತ್ತಾ ನಿಂತೆವು.

ಮುಸುಕು ಹಾಕಿಕೊಂಡ ಬೀದಿ ದೀಪಗಳು ಭೂತದಂತಹ ಅನಿಯಮಿತ ಬೆಳಕು ಚೆಲ್ಲಿ ಕತ್ತಲಲ್ಲಿ ಬಹು ಶೀಘ್ರವಾಗಿ ತಮ್ಮನ್ನೇ ಕರಗಿಸಿಕೊಂಡು ಬಿಡುತ್ತಿದ್ದವು.

ಕತ್ತಲಾಗಸದಲ್ಲಿ ಹೊಳೆವ ಮಿಣುಕು ನಕ್ಷತ್ರಗಳು ಚಡಪಡಿಸುವ ನೋಟ ಬೀರಿದ್ದವು.

ಒಂದಾನೊಂದು ಕಾಲದಲ್ಲಿ ರಾತ್ರಿ ಸಮಯದಲ್ಲಿ ಕೇವಲ ನಕ್ಷತ್ರಗಳ ಬೆಳಕು ಮಾತ್ರ ಇಂತಹ ದಿನಗಳಲ್ಲಿರುತ್ತಿದ್ದವು. ಈಗ ಇದ್ದಕ್ಕಿದ್ದಂತೆಯೇ ಚೆಲ್ಲಿಕೊಂಡು ಬರುವ ಹಳದಿ ಬಣ್ಣದ ಸರ್ಚ್‌ಲೈಟ್‌ಗಳು, ಬೃಹದಾಕಾರದ ಜೆಪ್‌ಲಿನ್ ವಿಮಾನ ಹಾರಿದಾಗ ಕಾಣುವ ಚುಟ್ಟಾದ ಅಂಬರು ಹೊಗೆಯಂತಹ ಬೆಳಕು ತೂರುವುದು ನಡೆದಿತ್ತು.

ನಾವು ನಮ್ಮ ಎಚ್ಚರಿಕೆಯಲ್ಲೇ ಇರಬೇಕೆಂದು ನಿರ್ಧರಿಸಿದ್ದೆವು. ನಾನಲ್ಲದೆ, ಒಬ್ಬ ಫ್ರೆಂಚ್ ಲೇಖಕ, ಇಬ್ಬರು ಸರ್ಬ್ ನಾಡಿನ ಕ್ಯಾಪ್ಟನ್‌ಗಳೂ ಇದ್ದು, ನಾಲ್ಕು ಮಂದಿ ಒಂದು ಗುಂಪಾಗಿದ್ದೆವು

ಪ್ಯಾರಿಸಿನ ಮಬ್ಬು ವಾತಾವರಣದಲ್ಲಿ ಎಲ್ಲ ದ್ವಾರಗಳೂ ಮುಚ್ಚಲ್ಪಟ್ಟ ಈ ಊರಲ್ಲಿ ನಾವು ಹೋಗುವುದು ತಾನೇ ಎಲ್ಲಿಗೆ? ಸರ್ಬ್ ಜೊತೆಗಾರರು, ಇಲ್ಲಿ ಇಡೀ ರಾತ್ರಿ ತೆರೆದಿರುವ ಯಾವುದೋ ಬಾರಿನ ಹೆಸರು ಸೂಚಿಸಿದರು. ಅಲ್ಲಿಯೇ ರಾತ್ರಿ ಕಳೆಯಲು ನಮ್ಮೊಡನೆ ಬಂದಿದ್ದ ಕೆಲವು ಆಫೀಸರುಗಳು ಆ ಬಾರೇ ತಮ್ಮ ವಾಸ್ತವ್ಯದ ಸ್ಥಳವೆಂಬಂತೆ ಅಲ್ಲಿಗೆ ಜಾರಿಕೊಂಡರು. ಬೇರೆ ಬೇರೆ ನಾಡಿನ ಯೋಧ ಸೋದರರು ಪ್ಯಾರೀಸಿಗೆ ಕೆಲಕಾಲ ಕಳೆಯಲು ಬಂದು ಸೇರಿಕೊಂಡಾಗ

ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳುವುದು ಗುಟ್ಟಿನಲ್ಲಿ ನಡೆಯುವುದು ಇದ್ದೇ ಇತ್ತು. ನಾವೂ ಸಹ ಬಹಳ ಜಾಗರೂಕತೆಯಿಂದ ದೀಪಗಳಿಂದ ಝುಗಝುಗಿಸುವ ಅಲ್ಲಿನ ಹಜಾರವನ್ನು ತಲುಪಿದೆವು. ಅಲ್ಲಿ, ಹೊರಗಿನ ಕತ್ತಲಿಗೆ ತದ್ವಿರುದ್ಧವಾಗಿತ್ತು. ಆ ಕೋಣೆಯ ವಿದ್ಯುದ್ದೀಪ ಕಿರಣಗಳನ್ನು ಪ್ರತಿಫಲಿಸುವ ಅಸಂಖ್ಯಾತ ಕನ್ನಡಿಗಳುಳ್ಳ ದೊಡ್ಡ ದೀಪಗೃಹದ ಒಳಭಾಗದಂತೆ ಇತ್ತು. ನಮಗಂತೂ ಎರಡು ವರ್ಷ ಹಿಂದಕ್ಕೆ ಹೋದಂತೆ ಆಗಿಬಿಟ್ಟಿತ್ತು. ಬಣ್ಣ ಹಚ್ಚಿಕೊಂಡ ಮಿಟಕಲಾಡಿ ಹೆಣ್ಣುಗಳೂ, ಶಾಂಪೇನ್, ಭಾವಾತ್ಮಕ ಲಂಬಾಣಿಗಳ ನೃತ್ಯ ಹಾಡಿನ ಹಾಗಿದ್ದ ನೀಗ್ರೊ ಡ್ಯಾನ್ಸಿನ ಹಾಡುಗಳನ್ನು ನಿಟ್ಟುಸಿರಿನ ದನಿಯಲ್ಲಿ ಹೊರ ಹೊಮ್ಮಿಸುವ ಪಿಟೀಲುಗಳು - ಇವು, ಯುದ್ಧ ಪೂರ್ವ ದಿನಗಳಲ್ಲಿ ಅದ್ಭುತವಾಗಿ ಕಾಣುತ್ತಿತ್ತು. ಆದರೆ ಇಂದು ಒಬ್ಬರೂ ಸಂಜೆ ಡೆಲಿಸ್ ಪೋಷಾಕು, ಧರಿಸಿರಲಿಲ್ಲ. ಇಂಗ್ಲಿಷ್, ರಷ್ಯನ್, ಸರ್ಬಿಯನ್ - ಎಲ್ಲ ಈ ಜನ ಕೊಳಕಾದ, ಮಾಸಿದ ಸಮವಸ್ತ್ರ ಧರಿಸಿದ್ದರು. ಗುಂಪಿನ ಪ್ರಶಂಸೆಯನ್ನು ಪಿಟೀಲು ಬಾರಿಸುತ್ತಿದ್ದ ಕೆಲವು ಬ್ರಿಟಿಷ್ ಸೈನಿಕರು ಅಮೃತ ಶಿಲೆಯಂಥ ತಣ್ಣಗೆ ಹೊಳೆವ ನಗೆಯಲ್ಲಿ ಸ್ವೀಕರಿಸುತ್ತಿದ್ದರು. ಅವರು ಹಳೇ ಕಾಲದ ಕೆಂಪು ತೊಡುಗೆ ತೊಟ್ಟು ಜಿಪ್ಸಿಗಳ ಸ್ಥಾನ ತೆಗೆದುಕೊಂಡಿದ್ದರು. ಒಂದು ಹೆಣ್ಣು, ಇವರತ್ತ ತೂರಾಡುತ್ತ ಒಂದು ಅವರಲ್ಲೊಬ್ಬನ ತಂದೆ ಹೆಸರು ಹೇಳಿ, 'ಲಾರ್ಡ್'- ಎಂದು ಪಿಸುಗುಟ್ಟಿದಳು. ಆತ ಉಪಕುಲದ ಕೋಟ್ಯಾಧೀಶ್ವರನೆಂದು ಪ್ರಸಿದ್ಧನಾಗಿದ್ದ.

'ಇಂದು ನಾವು ಸಂಭ್ರಮಿಸೋಣ, ನಾಳೆ ಕಾದಿರಬಹುದು ನಮಗೆ ಮರಣ'- ತಮ್ಮ ಬದುಕನ್ನೇ ಮುಡುಪಿಟ್ಟುಕೊಂಡಿದ್ದ ಸೈನಿಕ ಮಂದಿಯ ಪಾಡು ಏನಿತ್ತೆಂದರೆ, ಬೆಳಗಾಗ ಮತ್ತೊಂದು ಚಂಡಮಾರುತ ಎದುರಿಸಲು ಸಿದ್ಧರಾಗಿಯೇ ಇದ್ದು, ಒಂದು ರಾತ್ರಿಯನ್ನು ಕಳೆಯಲು ದಡಕ್ಕೆ ಬಂದು ತಂಗುವ ಉನ್ಮತ್ತ ನಾವಿಕರಂತೆ ಆಗಿದ್ದು, ಈ ಯುದ್ಧಾಳುಗಳು ಸತ್ವವನ್ನು ಕುಡಿದು ಹೀರಿ ಗುಟುಕರಿಸುತ್ತಾ, ನಗುತ್ತಾ, ಹಾಡುತ್ತಾ, ಪ್ರೀತಿಸುತ್ತಾ ಇಲ್ಲಿದ್ದರು.

ತಮ್ಮ ನಾಡಿನಿಂದಾಗಿ ಪ್ಯಾರಿಸಿಗೆ ಬರುವಂತಾದ ಅದೃಷ್ಟ ಈ ಇಬ್ಬರು ಸರ್ಬ್‌ನಾಡಿನ ಸೈನಿಕರಿಗೆ ತೃಪ್ತಿಯನ್ನೇ ತಂದಂತಿತ್ತು. ಕನಸಿನ ಈ ಭವ್ಯ ಪಟ್ಟಣದ ಚಿತ್ರಣ ಅವರ ಊರಿನಲ್ಲಿದ್ದ ಕಾವಲು ದಂಡಿನ ಭಯಂಕರ ಏಕತಾನತೆಯ ವೇಳೆಯಲ್ಲಿ ಮನಸ್ಸಿನಲ್ಲಿ ತುಂಬಿಕೊಳ್ಳುತ್ತಿದ್ದದ್ದುಂಟು.

ಬಹುಪಾಲು ಕವಿಗಳೇ ತುಂಬಿರುತ್ತಿದ್ದ ಅವರ ನಾಡಿನ ಈ ಇಬ್ಬರು ಸರ್ಬ್‌ರಿಗೆ ಕಥೆ ಕಟ್ಟಿ ಹೇಳುವ ಉಡುಗೊರೆ ದೈವಿಕವಾಗಿಯೇ ಬಂದಿತ್ತು. ಟರ್ಕಿಶ್ ಭಾಗವಾಗಿದ್ದ ಸರ್ಬ್ ನಾಡಿನಲ್ಲಿ ಮೂವತ್ತು ವರ್ಷದ ಹಿಂದಕ್ಕೆ ಹಾದು ಹೋದಾಗ, ಬರಿಯ ಕುರಿಕಾಯುವ ಇಲ್ಲವೇ ಯುದ್ಧ ಯೋಧರು ತುಂಬಿದ ಆ ನಾಡಲ್ಲಿ ಕಾವ್ಯಕ್ಕಿರುವ ಪ್ರಾಮುಖ್ಯತೆ ನೆನೆದು ಅಭಿಮಾನಪಡುವಂತೆ ಆಗಿತ್ತು. ಓದು ಬರಹ ಬಾರದ ಆ ನಾಡಲ್ಲಿ ಭಾವನೆ ಮತ್ತು ಸ್ಮರಣೆಯೇ ಕಾವ್ಯವಾಗಿ ವಾಚ್ಯದ ಮೂಲಕ ಹರಡುತ್ತಿತ್ತು. ಈ ಗಾಯಕರೇ ಆ ನಾಡಿನ ಚರಿತ್ರಕಾರರಾಗಿದ್ದರು. ಅವರಿಂದಾಗಿ ಸರ್ಬ್ ನಾಡಿನ ಮಹಾಕಾವ್ಯದ ಜೀವ ಹೊಸ ಹೊಸ ಹಾಡುಗಳನ್ನು ಸೇರಿಸಿಕೊಂಡು ಉಳಿದಿತ್ತು.

ಶ್ಯಾಂಪೇನ್ ಕುಡಿಯುತ್ತಿದ್ದ ಈ ಇಬ್ಬರು ಯೋಧರು ಹಿಮ್ಮೆಟ್ಟಿ ಹೋದ ಮಾಸಗಳ ತಮ್ಮ ಕಷ್ಟ ಕಾರ್ಪಣ್ಯ ನೆನೆಸಿಕೊಳ್ಳುತ್ತಿದ್ದರು. ಹಸಿವೆ; ಚಳಿ, ಮೇಲಿನ ಆ ಸಮರ; ಹಿಮಪಾತದಲ್ಲಿ ಕದನ, ಹತ್ತು ಶತ್ರುಗಳ ಮುಂದೆ ಒಬ್ಬನ ಪ್ರತಾಪ; ಎಣಿಕೆ ಇಲ್ಲದ ಮಾನವ ಹಾಗೂ ಪ್ರಾಣಿಗಳ ಭಯಾನಕ

ಗೊಂದಲ; ಮಿಶಿನ್‌ಗನ್ ಸಾಲುಗಳ ಹಿಂಬದಿಯ ರೈಫಲ್‌ಗಳ ಸತತ ಆಸ್ಫೋಟ; ಸುಟ್ಟ ಗ್ರಾಮಗಳು; ಅಗ್ನಿ ಜ್ವಾಲೆಯಲ್ಲಿ ಕಿರುಚಾಡುವ ಗಾಯಾಳುಗಳು ಮತ್ತು ಬಂಧಿಗಳು; ವಿಕಲಾಂಗರಾಗಿ ಹೋದ ಹೆಣ್ಣುಮಕ್ಕಳು, ಮತ್ತವರ ಮೇಲೆ ಎರಗುವ ಕಾಗೆಗಳು; ಕೋಲೂರಿ ನಡೆವ ಕೀಲು ನೋವಿನ ಕರುಣಾಜನಕ ರೋಗಿಯಾದ ಮುದಿ ಚಕ್ರವರ್ತಿ ಪೀಟರನು, ಪಿಢಿಗೆ ಬಾಗುವ ಷೇಕ್ಸ್‌ಪಿಯರನ ದೊರೆಗಳಂತೆ ಮನದಲ್ಲಿ ಬಾಗಿಕೊಂಡು ಅಶ್ವದಳದೊಂದಿಗೆ ಬೆಳ್ಳಗಿದ್ದ ಇಳುಕಲನ್ನು ದಾಟಿದ ಅವಸ್ಥೆ, ಇವನ್ನೆಲ್ಲಾ ಈ ಇಬ್ಬರು ಯೋಧರು ನೆನಸಿಕೊಳ್ಳುತ್ತಾ ಇದ್ದದ್ದನ್ನು ಕೇಳಿಸಿಕೊಳ್ಳುತ್ತಾ ಇದ್ದೆ.

ಹದ್ದಿನ ಕೊಕ್ಕಿನಂತೆ ಮೂಗುಳ್ಳ ಇವರಿಬ್ಬರೂ ತೆಳ್ಳಗಿದ್ದರೂ ಕಸ ತುಂಬಿದ ಮೈಕಟ್ಟಿನ ಬಲಿಷ್ಠರಾಗಿದ್ದರು. ಜೊಂಪುಮೀಸೆ ಹೊತ್ತ ಇವರುಗಳ ಟೊಪ್ಪಿಗೆ ಕೆಳಗೆ, ತಲೆ ಕೆಳಗು ಮಾಡಿದ ಒಣ ಹುಲ್ಲು ಮಾಡಿ ನಂತರ ಕೂದಲ ಜೊಂಪೆ ಟೋಪಿ ಮೀರಿ ಹೊರಕ್ಕೆ ಬಂದಿತ್ತು. ಸಾಸಿವೆ ಬಣ್ಣದ ಯೂನಿಫಾರಂ ಧರಿಸಿದ್ದ ಇವರು, ನಲ್ವತ್ತು ವರ್ಷಗಳ ಹಿಂದಿನ ಹೆಣ್ಣು ಮಕ್ಕಳಂತೆ ಭಾವಾತ್ಮಕತೆ ಹಾಗೂ ಕಲಾತ್ಮಕತೆಯುಳ್ಳ ಪ್ರಶಾಂತ ಎದೆಗಾರಿಕೆಯುಳ್ಳವರಾಗಿದ್ದರು.

ಇಬ್ಬರೂ ಇನ್ನೂ ಏನೇನೊ ಮಾತಾಡುತ್ತಲೇ ಉಳಿದಿದ್ದರು. ಕೆಲವೇ ತಿಂಗಳ ಹಿಂದೆ ನಡೆದದ್ದನ್ನು ಹೇಳಿಕೊಳ್ಳುತ್ತಾ ವಿಷಸರ್ಪವನ್ನು, ಭಲ್ಲೆಯಾಗಿಸಿಕೊಳ್ಳುವ ರಕ್ತದಾಹಿ ಪಿಶಾಚಿ 'ವಿಲ್ಲಾಸ' ನನ್ನ ಎದುರಿಸಿದ ರೀತಿಯಂತೆ, ಸರ್ಬ್ ನಾಡಿನ ಮಹಾಕಾವ್ಯದ ನಾಯಕ 'ಮಾರ್ಕೋವಿಚ್'ನ ವೀರ ಕೃತಿ ಬಣ್ಣಿಸುವಂತೆ ತಮ್ಮ ಅನುಭವಗಳನ್ನು ಹೇಳಿಕೊಳ್ಳುತ್ತಿದ್ದು. ಬಾರ್‌ನಲ್ಲಿ ಕುಳಿತು ತಮ್ಮ ಅನುಭವ ಬಣ್ಣಿಸುತ್ತಿದ್ದ ಇವರು ಇತ್ತೀಚಿನವರೆಗೆ ನಿರ್ದಯ, ಭಯಂಕರ ಕ್ರೌರ್ಯ ತುಂಬಿದ ಮನುಷ್ಯ ಬಾಳನ್ನು ಬಾಳುತ್ತಿದ್ದರು ಎಂಬುದು ವ್ಯಕ್ತ ವಾಗುತ್ತಿತ್ತು.

ನಮ್ಮೊಂದಿಗಿದ್ದ ಫ್ರೆಂಚ್ ಜೊತೆಗಾರ ಹೊರಟು ಹೋದನು. ಇಬ್ಬರು ಸರ್ಬ್ ಕ್ಯಾಪ್ಟನ್‌ಗಳಲ್ಲಿ ಒಬ್ಬನು ಮುಂದಿನ ಮೇಜಿನ ಮೇಲೇ ಕಣ್ಣಿಟ್ಟುಕೊಂಡು ತನ್ನ ವ್ಯಾಖ್ಯಾನ ಮಾಡುತ್ತಲೇ ಇದ್ದ.

ಆ ಮೇಜಿನ ಬಳಿ ಪುಕ್ಕವಿದ್ದ ಹ್ಯಾಟ್ ತೊಟ್ಟು, ತನ್ನ ನೀಳ ಕತ್ತಿಗೆ ಬಿಳಿಯ ಫರ್ ಸುತ್ತಿದ್ದ ಹೆಣ್ಣು ಕಳ್ಳನೋಟದಲ್ಲಿ ತನ್ನ ಕಪ್ಪು ಕಣ್ಣುಗಳಿಂದ ಇವನನ್ನೇ ನೋಡುತ್ತಿದ್ದಳು. ಆ ನೋಟ ಈತನನ್ನು ಆಕರ್ಷಿಸಿದ್ದು ಸ್ಪಷ್ಟವಿತ್ತು. ಆಕರ್ಷಣೆ ಪಡೆದುಕೊಳ್ಳಲಾಗದೆ ಕೊನೆಗೊಮ್ಮೆ ಈತ ಆ ಮೇಜಿನತ್ತ ನಡೆದ. ಸ್ವಲ್ಪವೇ ಸಮಯದಲ್ಲಿ ಅವನು ಮಾಯವಾಗಿಬಿಟ್ಟ. ಅವನೊಂದಿಗೇ ಆ ಪುಕ್ಕ ಹ್ಯಾಟು, ಕತ್ತು ಬಳಸಿಕೊಂಡ ಬಿಳಿ ಫರ್ ಕೂಡ ಮಾಯವಾಗಿಬಿಟ್ಟಿತು.

ಮಿತಭಾಷಿಯಾದ ಕಿರಿಯ ಕ್ಯಾಪ್ಟನ್ ಜೊತೆಗೆ ನಾನೊಬ್ಬನೇ ಉಳಿದೆ. ಅವನು ಒಂದು ಗುಟುಕು ಮದ್ಯ ಹೀರಿ, ಬಾರಿನ ಗಡಿಯಾರ ನೋಡಿದ. ಯಾವುದೊ ಬಲವಾದ ನಂಬಿಗೆ ಸೂಚಿಸುತ್ತಿರುವ ದೃಷ್ಟಿಯಲ್ಲಿ ನನ್ನನ್ನೊಮ್ಮೆ ನೋಡಿದ. ಅವನ ತಲೆಯನ್ನು ತುಂಬಿದ್ದ ದಾರುಣ ಕತೆಯನ್ನು ಬರಿದು ಮಾಡಿಕೊಳ್ಳಲೋಸುಗ ಅವನು ನನ್ನನ್ನೇ ಆಶ್ರಯಿಸಿಕೊಂಡ. ಆತ ಮತ್ತೊಮ್ಮೆ ಗಡಿಯಾರದತ್ತ ಕಣ್ಣು ಹಾರಿಸಿದ. ಆಗ ರಾತ್ರಿ ಒಂದು ಗಂಟೆ ಸಮಯವಾಗಿತ್ತು.

"ಇದೇ ವೇಳೆಯಲ್ಲಿ" -ಇದ್ದಕ್ಕಿದ್ದಂತೆಯೇ ಅವನು ಉಗ್ಗಡಿಸಿದ, ತನ್ನ ಮೌನ ಸ್ವಗತವನ್ನು ಮಾತಿಗಿಳಿಸಿ- "ನಾಲ್ಕು ತಿಂಗಳ ಹಿಂದೆ ಇದೇ ದಿನ".

ಅವನ ಮಾತುಗಳನ್ನಾಲಿಸಿದೆ - ಕಗ್ಗತ್ತಲ ರಾತ್ರಿಯನ್ನು ಕಂಡೆ, ಬರ್ಫತುಂಬಿದ ಕಣಿವೆ, ಬಿಳೀ ಪರ್ವತಗಳಲ್ಲಿ ತುಂಬಿ ಬೆಳೆದ ಪೀಚ್ ಮತ್ತು ಪೈನ್ ವೃಕ್ಷಗಳು, ಅವುಗಳ ಟೊಂಗೆಗಳಿಂದ ಹತ್ತಿಯಂತೆ ಉದುರುತ್ತಿರುವ ಬರ್ಫಿನ ತೆಳು ಪೊರೆ ನಾಕಂಡೆ. ನಾನು ಹಳ್ಳಿಯ ಪಾಳುಗಳನ್ನು ಕಂಡೆ. ಆ ಪಾಳುಗಳಲ್ಲಿ 'ಅಡ್ರಾಂಟಿಕ್' ಕಡೆಗೆ ಹಿಂದಿರುಗುತ್ತಿದ್ದ ಸರ್ಬಿಯನ್ ತುಕುಡಿ ಕಂಡೆನು. ನನ್ನೀ ಗೆಳೆಯ, ಈ ತುಕುಡಿಯ ಹಿಂಭಾಗವನ್ನು ಗಾರ್ಡ್ ಮಾಡುತ್ತಿದ್ದು, ಈ ಮೊದಲು ಇವರೆಲ್ಲ ಕೇವಲ ಸಂಗಾತಿಗಳಾಗಿದ್ದು, ಈಗ ದೊಂಬಿಗುಂಪಾಗಿ ಭಯದಿಂದ ಕಂಗಾಲಾಗಿ, ಮಂಕಾಗಿ ಹೋಗಿದ್ದರು. ಈ ರೈತಾಪಿ ಜನರಿಂದ ಹೆಚ್ಚು ತುಂಬಿ ಹೋದ ಆ ಮಿಲಿಟರಿ ತುಕಡಿ ಯಾಂತ್ರಿಕವಾಗಿ, ಹೊಡೆದು ಅಂಕೆಗೊಳಗಾಗಿ ಚಲಿಸುವ ಮೂಕ ಪ್ರಾಣಿಗಳಂತೆ ಚಲಿಸುತ್ತಿತ್ತು. ಗಾಯಾಳುಗಳು ಹೆಣ್ಣು ಮಕ್ಕಳ ಸಹಿತ ನರಳುತ್ತಾ ಮುಂಬರಿಯುತ್ತಿದ್ದರು. ನೀಳವಾಗಿ, ಬಲ ಉಳ್ಳವರಾಗಿದ್ದರೂ ಕಪ್ಪಾಗಿ ಬಣ್ಣಗೆಟ್ಟು ಹೋದ ಮತ್ತೆ ಕೆಲವು ಹೆಂಗಸರು ವಿಷಾದ ಮೌನದಿಂದ ಅಲ್ಲಲ್ಲೇ ಬಿದ್ದಿದ್ದ ಸತ್ತ ದೇಹಗಳ ಮೇಲೆ ಬಾಗಿ ನೋಡುತ್ತಾ, ಆ ದೇಹದಲ್ಲಿಯೇ ಉಳಿದುಹೋಗಿದ್ದ ಗನ್‌ಗಳು, ಕಾರ್ಡ್‌ರಿಬ್ ಬೆಲ್ಟನ್ನು ತೆಗೆದುಕೊಳ್ಳುವುದನ್ನು ಕಂಡೆ.

ಶೆಲ್‌ಗಳ ಮಿಣುಕು ಕೆಂಪು ಜ್ವಾಲೆಗಳು ಪಾಳುಗಳ ಮೇಲಿಂದ ಬಂದು ಆ ಕರೀ ಕತ್ತಲಿಗೆ ಬಣ್ಣ ಎಸೆಯುತ್ತಿದ್ದವು. ರಾತ್ರಿ ಗರ್ಭದಿಂದ ಮತ್ತಷ್ಟು ಸಾವು ಹೊತ್ತು ಈ ಜ್ವಾಲೆಗಳು ಜ್ವಲಿಸುತ್ತಿದ್ದವು. ಕಾಣದ ಕೀಟಗಳ ದನಿಯಂತೆ ಕತ್ತಲ ವಾಯುಮಂಡಲದಲ್ಲಿ ಬುಲೆಟ್‌ಗಳು ಸುಂಯ್‌ಗುಟ್ಟಿದ ದನಿ ತೆಗೆಯುತ್ತಿದ್ದವು.

ಬೆಳಗಾಗುವ ವೇಳೆಗೆ ಹುಡಿಪುಡಿ ಮಾಡುವಂತಹ ಮಹಾ ಧಾಳಿಯಾಗಿತ್ತು. ಆ ಕಗ್ಗತ್ತಲ ಕಪ್ಪಿನಲ್ಲಿ ಯಾವ ಶತ್ರು ತಮ್ಮ ಮೇಲೆ ಸಾಲ್ಗಟ್ಟಿ ಎರಗುತ್ತಿದ್ದಾರೆ ಎಂಬುದು ತಿಳಿಯುತ್ತಿರಲಿಲ್ಲ. ಅವರು ಜರ್ಮನರೇ, ಆಸ್ಟ್ರಿಯದವರೇ, ಬುಲ್ಗೇರಿಯಾದವರೆ ಅಥವ ತುರ್ಕಿಸ್ಥಾನದವರೆ?.... ಈ ಇವರು ಅನೇಕ ಶತ್ರು ಗುಂಪುಗಳನ್ನು ಎದುರಿಸಬೇಕಾಗಿತ್ತು. ನಾವಂದು ಹಿಮ್ಮೆಟ್ಟಬೇಕಾಯಿತು" ಸರ್ಬ್ ಸೈನಿಕ ಹೇಳುತ್ತಾ ಹೋಗಿದ್ದ. "ನಮ್ಮಲ್ಲಿ ಹಿಂದಕ್ಕುಳಿದವರನ್ನು ಹಾಗೆಯೇ ಬಿಟ್ಟು ದಾಟಿ ಬಿಡಬೇಕಿತ್ತು. ಸರಂಜಾಮು ಹೊತ್ತ ಪ್ರಾಣಿಗಳೊಂದಿಗೆ ಹೆಂಗಸರು, ಮಕ್ಕಳು, ಮುದುಕರು ಸೇರಿಕೊಂಡ ಆ ಉದ್ದ ಸಾಲನ್ನು ಕಡುರಾತ್ರಿ ನುಂಗುತ್ತಿತ್ತು. ಗಟ್ಟಿಗ ಗಂಡಸರು ಮಾತ್ರಾ ಪಾಳಿನಲ್ಲಿ ನಿಂತು ಶೆಲ್ ಧಾಳಿ ಮುಂದುವರಿಸಿದ್ದರು. ಎಲ್ಲ ಹೇಳುತ್ತಿದ್ದಂತೆಯೇ ಕ್ಯಾಪ್ಟನ್ನನಿಗೆ ಒಂದು ಅತಿ ಕ್ರೂರ ನೆನಪು ಬಂದಿತು.

"ಆ ಗಾಯಾಳುಗಳು!..... ಅವರ ಬಗ್ಗೆ ನಾವೇನು ಮಾಡಲು ಸಾಧ್ಯ!" ಉಗ್ಗಡಿಸಿಕೊಂಡ.

ಶೆಲ್‌ಧಾಳಿಯಲ್ಲಿ, ಛಾವಣಿಯಲ್ಲಿ ತೂತು ಬಿದ್ದ ಧಾನ್ಯಾಗಾರದ ಒಳಗಿನ ಹುಲ್ಲರಾಶಿ ಮೇಲೆ ಸುಮಾರು ಐವತ್ತು ಗಾಯಾಳುಗಳು ಅತಿಯಾದ ನೋವು ಅನುಭವಿಸುತ್ತಾ ಬಿದ್ದುಕೊಂಡಿದ್ದರು. ಅನೇಕ ದಿನಗಳ ಹಿಂದಿನಿಂದಲೇ ಗಾಯಗೊಂಡಿದ್ದ ಇವರು ಇಲ್ಲೀ ತನಕ ಹೇಗೆ ತೆವಳಿ ಬಂದು ಆಶ್ರಯ ಪಡೆದುಕೊಂಡಿದ್ದರೊ ಏನೊ. ಇದೇ ರಾತ್ರಿ ರಣಗಾಯಾಳುಗಳೂ ಸಹ ರಕ್ತ ಸುರಿದು ಹೋಗುತ್ತಿರುವ ಮಾಂಸದಗಾಯವನ್ನು ಕೈಗೆ ಸಿಕ್ಕ ಚಿಂದಿ ಬಟ್ಟೆಗಳಲ್ಲಿ ಕಟ್ಟಿ ನೋವ ತಡೆದುಕೊಂಡು ಇದ್ದರು. ಈ ಗಾಯಾಳುಗಳಲ್ಲಿ ಹೆಂಗಸರೂ ಸಹ ಇದ್ದರು.

ಕೊಳೆಯುತ್ತಿರುವ ಮಾಂಸ, ಒಣಗಿದ ರಕ್ತ, ಹೊಲಸು ಬಟ್ಟೆ ಮತ್ತು ದುರ್ಗಂಧದ ಶ್ವಾಸ ತುಂಬಿದ ಆ ಆಶ್ರಯತಾಣವನ್ನು ಈ ಕ್ಯಾಪ್ಟನ್ ಪ್ರವೇಶಿಸಿದ್ದ. ಇವನ ಮೊದಲ ನುಡಿ ಕೇಳುತ್ತಲೇ ಕೊಂಚ ತ್ರಾಣವಿದ್ದ ಕೆಲವರು ಒದ್ದಾಡುತ್ತಾ, ಅಲ್ಲಿದ್ದ ಹೊಗೆ ತುಂಬಿ ಮಂಕಾಗಿ ಬೆಳಗುತ್ತಿದ್ದ ಲಾಂದ್ರದ ಸಮೀಪಕ್ಕೆ ಬಂದರು. ನರಳಾಟ ತಡೆದುಕೊಂಡಿದ್ದು, ಸಾವಿಗೆ ಹತ್ತಿರವಾಗಿದ್ದ ಈ ಮಂದಿ ಸಾವಿಗಿಂತಾ ಭಯಂಕರವಾದದ್ದೇನನ್ನೋ ನಿರೀಕ್ಷಿಸಿದ್ದರಿಂದ ಭಯಾಶ್ಚರ್ಯದ ಮೌನ ಉಂಟಾಯಿತು.

ಶತ್ರುಗಳ ಕೃಪೆಗೆ ದೂಡಲ್ಪಟ್ಟೆವೆಂಬ ಸಂಗತಿ ಅರಿತ ಈ ಮಂದಿ ಎದ್ದು ನಿಲ್ಲಲು ಹವಣಿಸಿದರೂ ಮತ್ತೆ ಮತ್ತೆ ಕುಸಿದು ಬೀಳುತ್ತಿದ್ದರು. ಈ ಕ್ಯಾಪ್ಟನ್ ಮತ್ತು ಇವನ ಜೊತೆಗಾರರನನ್ನು ಕಂಡಕೂಡಲೇ ಆ ಜನ ಹತಾಶೆ ಪ್ರಾರ್ಥನೆಯ ಮೇಳಗೀತೆ ಹಾಡತೊಡಗಿದರು :

“ಸೋದರರೇ, ನಮ್ಮನ್ನು ಹೀಗೇ ಬಿಟ್ಟು ಮುಂದಕ್ಕೆ ಹೋಗಿ ಬಿಡಬೇಡಿ. ಕರುಣೆಯಿಟ್ಟು, ಸೋದರರೇ-”

ಆ ಜನರನ್ನು ಹೀಗೆಯೇ ಬಿಟ್ಟು ಹೋಗಿ ಬಿಡಬೇಕಾದ ಪರಿಸ್ಥಿತಿಯನ್ನು ನಿಧಾನದಲ್ಲಿ ಗ್ರಹಿಸಿ, ಗಾಯಾಳುಗಳನ್ನು ಅವರವರ ಹಣೆಯ ಬರಹಕ್ಕೆ ಬಿಟ್ಟುಬಿಡಬೇಕೆಂದುಕೊಂಡಿದ್ದರು, ಇವರು. ಶತ್ರುವಿನ ಕೈಗೆ ಬೀಳಬೇಕಾದಂತಹ ಪರಿಸ್ಥಿತಿ! ನಮ್ಮವರೇ ಆದ ಇವರೆಲ್ಲಾ ಶತ್ರುಗಳಾದ ಬಲ್ಗೇರಿಯನ್ ಅಥವ ಟರ್ಕಿಯರ ಅನುಗ್ರಹಕ್ಕೆ ಪಾತ್ರರಾಗಬೇಕಾದೀತು! ತುಟಿಯಿಂದ ಹೇಳಲಾರದ ಮಾತನ್ನು ಅವರ ಕಣ್ಣುಗಳು ಹೇಳಿದವು. ಯುದ್ಧ ಕೈದಿಗಳಾಗುವ ಸರ್ಬ್‌ಗಳಾಗಿ ಹುಟ್ಟಿರುವುದೇ ಒಂದು ಶಾಪ. ಸಾವಿನ ಹೊಸಿಲಲ್ಲಿದ್ದವರಿಗೂ ಸಹ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವ ಪರಿಸ್ಥಿತಿ ಮೈ ನಡುಕ ತುಂಬಿತ್ತು. ಬಾಲ್ಕನರ ಪ್ರತೀಕಾರವು ಸಾವಿಗಿಂತಾ ಭಯಂಕರ “ಸೋದರರೇ, ಸೋದರರೆ-”

ಅವರುಗಳ ಅಳುವಿನ ಆಳದಲ್ಲಿ ಮುಚ್ಚಿಟ್ಟ ಆಸೆಗಳನ್ನು ಅಳೆದು, ಅವರತ್ತ ಕಡೆಯದಾಗಿ ನೋಟ ಬೀರಿ ನಿಂತನಿವ.

“ನಾನು ಹಾಗೆ ಮಾಡಬೇಕೆ?....” ಅನೇಕ ಸಲ ಪ್ರಶ್ನಿಸಿಕೊಂಡು ಕೇಳಿದ. ಎಲ್ಲರೂ ಹೌದೆಂಬಂತೆ ತಲೆಯಾಡಿಸಿದರು. ಇವರುಗಳ ಆಯ್ಕೆಯನ್ನು ಮಾಡಲೇ ಬೇಕಾದಾಗ ಅವನು ಈ ಜೀವಂತ ಸರ್ಬಿಯನ್‌ಗಳನ್ನು ಹೀಗೆಯೇ ಬಿಟ್ಟು ಹೋಗಲಾರದಾದ. ತನಗೆ ಇಂತಹ ಪರಿಸ್ಥಿತಿ ಬಂದಿದ್ದಲ್ಲಿ ತಾನೂ ಇವರಂತೆಯೇ ಬಯಸುತ್ತಿರಲಿಲ್ಲವೆ?

ಶಸ್ತ್ರಾಸ್ತ್ರಗಳ ಅಭಾವದಿಂದ ಇವನ ಜೊತೆಗಾರ ಸೈನಿಕರು ತಮ್ಮ ಕಾಡತೂಸುಗಳನ್ನು ಬಹಳ ಎಚ್ಚರಿಕೆಯಿಂದ ನೋಡಿಕೊಂಡರು. ಈ ಕ್ಯಾಪ್ಟನ್ ಕತ್ತಿ ಹಿರಿದ; ಕೆಲ ಸೈನಿಕರು ಈಗಾಗಲೇ ತಮ್ಮ ಬಂದೂಕಿನ ಮುಂದಿನ ಚೂಪು ಬಯೋನೆಟ್ ಬಳಸಿ ತಮ್ಮ ಕಾರ್ಯ ಪ್ರಾರಂಭಿಸಿದ್ದರು. ಆದರೆ ಅವರು ಎಸಗುತ್ತಿದ್ದ ಕಾರ್ಯದ ಶೈಲಿ ತಡವರಿಕೆಯಿಂದ ತುಂಬಿ, ವಿಕಾರವಾಗಿ, ಒರಟೊರಟಾಗಿ ಇದ್ದದ್ದರಿಂದ ಅವರ ಇರಿತದ ರೀತಿ ತಡೆಯಲಾರದ ನೋವು, ರಕ್ತದ ಮಹಾಪೂರವನ್ನು ಉಂಟುಮಾಡಿತ್ತು. ಆದ್ದರಿಂದಲೇ ಎಲ್ಲ ಗಾಯಾಳುಗಳೂ ಈ ಕ್ಯಾಪ್ಟನ್ ಬಳಿಗೆ ತಾವಾಗಿಯೇ ತೆವಳಿಕೊಂಡು ಬರುತ್ತಿದ್ದರು.

ಇವನ ಕೈ ಚಳಕದಲ್ಲಿ ಸಾವಿನ ಭೀಕರತೆ ಸ್ವಲ್ಪ ಕಮ್ಮಿಯಾಗುವುದು ಅರಿತರಲ್ಲದೆ ಅವನ ಪದವಿಯಿಂದಾಗಿ ತಮ್ಮ ಸಾವಿಗೂ ಒಂದು ಗಾಂಭೀರ್ಯ ಬರುವುದನ್ನು ತಿಳಿದು, ಆಕರ್ಷಿತರಾಗಿ,

ನನ್ನನ್ನು ಮುಗಿಸು.,.. ಸೋದರಾ ನನ್ನನ್ನು ಮುಗಿಸು..." ಕ್ಯಾಪ್ಟನ್ ತನ್ನ ಕತ್ತಿಯ ತುದಿಯನ್ನು ಬಂದವರ ಗಂಟಲಿಗಿಟ್ಟು, ಕಂಠದ ರಕ್ತನಾಳ ಒಮ್ಮೆಗೇ ಕತ್ತರಿಸಿ ಹೋಗುವಂತೆ ಮಾಡುತ್ತಿದ್ದ.

"ಟಕ್, ಟಕ್" ಪ್ರತ್ಯೇಕ ದನಿ ನನಗೆ ಕೇಳಿಸಿ, ನನ್ನ ಕಣ್ಮುಂದೆ ಭೀಭತ್ಸ ದೃಶ್ಯ ಮೂಡಿಸಿದ್ದ.

ಅವರೆಲ್ಲರೂ ದೇಕುತ್ತಾ ಬಂದರು.

ಕ್ಯಾಪ್ಟನ್ನಿನ ಪಾದಗಳಿಗೆ ಮುತ್ತಿಗೆ ಹಾಕಿದರು.

ತಾನು ಮಾಡುವ ಕೃತ್ಯ ತಾನೇ ನೋಡಲಾರದಾದ. ಮೊದಮೊದಲು ಈತ ತಲೆ ಅತ್ತಕಡೆಯಿಂದ ತಿರುಗಿಸಿಕೊಳ್ಳಲು ಹವಣಿಸಿದ; ಇವನ ಕಣ್ತುಂಬ ಕಣ್ಣೀರು ಉಕ್ಕುತ್ತಿತ್ತು. ಒಂದೇ ಏಟಿಗೆ ಕೆಲಸ ಮುಗಿಯದೆ, ಅವರುಗಳ ನೋವು ಹೆಚ್ಚಾಗಿ ಬಿಡುತ್ತಿತ್ತು. ಶಾಂತವಾಗಿರಬೇಕು, ಆಗ! ಒಂದು ಕಂಪಿಸದಕೈ ಮತ್ತು ದೃಢ ಹೃದಯ! 'ಟಕ್-ಟಕ್' 'ಸೋದರಾ ನನ್ನನ್ನು ತೆಗೆದುಕೊ!....ತೆಗೆದುಕೊ ನನ್ನನ್ನು'

ಈ ದುರ್ದೈವದ ಮಂದಿ ತಾವು ಬಲಿಯಾಗುವ ಮುನ್ನ ಶತ್ರುವಿನ ಆಗಮನವೆಲ್ಲಾಗಿ ಬಿಡುವುದೊ ಎಂದು ಹೆದರಿದ್ದರು. ತಮ್ಮ ಸಾವಿನ ಪಾಳಿಗಾಗಿ ತಾಮುಂದು ನಾಮುಂದು ಎಂದು ಜಗಳಾಡುತ್ತಿದ್ದ ಅವರು ಯಾವ ಭಂಗಿ ಅತ್ಯುತ್ತಮ ಎಂದು ತಾವೇ ನೋಡಿ ಕಲಿತುಬಿಟ್ಟಿದ್ದರು. ಪ್ರತಿಯೋರ್ವನೂ ತನ್ನ ಶಿರವನ್ನು ವಾಲಿಸಿಕೊಂಡು, ಕುತ್ತಿಗೆ ಬಿಗಿಯಾಗಲು ಅನುವುಮಾಡಿ, ಅದರಿಂದ ರಕ್ತನಾಳ ಗಟ್ಟಿಯಾಗಿಸಿಕೊಂಡು ಅದು ಹೊರಗೆ ಚೆನ್ನಾಗಿ ಬರುವಂತೆ ಮಾಡಿಕೊಳ್ಳುತ್ತಿದ್ದರಿಂದ ಮೃತ್ಯುವಿನ ಏಟು ಸಮವಾಗಿ ಅಲ್ಲಿ ಬೀಳುವಂತಾಗುತ್ತಿತ್ತು.

'ಸೋದರಾ, ನನ್ನ ತಕ್ಕೋ!'... ರಕ್ತದ ಹೊಳೆ ಬಿರಿದು ಹರಿಯುತ್ತಿದ್ದಂತೆಯೇ ಅದು ಚೀಲದಿಂದ ಹೊರಬಿದ್ದ ಕೆಂಪು ದ್ರಾಕ್ಷಾರಸದಂತೆ ಕಾಣುತ್ತಾ ಶವದ ಮೇಲೆ ಮತ್ತೊಂದು ಶವ ಬೀಳುತ್ತಿತ್ತು.

ಈ ಬಾರ್ ಖಾಲಿಯಾಗುತ್ತಾ ಬಂದಿತು. ತಮ್ಮ ಸುಗಂಧ ದ್ರವ್ಯ ಮುಖದ ಪೌಡರ್‌ನ ಸುವಾಸನೆ ಬೀರುತ್ತಿದ್ದ ಲಲನಾಮಣಿಗಳು ತಾವು ಆದರಿಸಿದ್ದ ಸಮವಸ್ತ್ರದವರನ್ನು ಬಿಟ್ಟು ಹೊರಹೊರಟರು. ಹಗುರ ಹೃದಯದ ನಗೆಯ ಅಲೆ ಮೇಲಿಂದ ಇಂಗ್ಲೀಷ್ ಪಿಟೀಲುಗಳು ತಮ್ಮ ಕೊನೆಯ ನುಡಿ ನುಡಿಸಿದವು. ಈ ಸರ್ಬ್ ಯೋಧ, ಕೈಯಲ್ಲಿ ದಂತವರ್ಣದ ಚಾಕು ಇಟ್ಟುಕೊಂಡು, ತನ್ನ ನೆನಪುಗಳನ್ನು ಕಿತ್ತು ಹಾಕಲಾರದೆ, ಯಾಂತ್ರಿಕವಾಗಿ ಮೇಜನ್ನೇ ಕುಟ್ಟುತ್ತಾ ಉಳಿದ.

"ಟಕ್... ಟಕ್?" ●

(ವಿ.ಬಿ. ಇಬ್‌ನೆಸ್ (೧೮೬೭-೧೯೨೮) ಸ್ಪೇನಿನವ. ವಕೀಲಿ ವೃತ್ತಿಯನ್ನು ತೊರೆದು ಸಂಪೂರ್ಣ ಸಾಹಿತ್ಯಕ್ಕೆ ತನ್ನನ್ನು ತೊಡಗಿಸಿಕೊಂಡ ಈತನ ಪ್ರಮುಖ ಕೃತಿ Blood and Sand. ಇದು ರೊಡಾಲ್ಫ್ ವಾಲಂಟಿನೊ ನಿರ್ಮಿಸಿದ ಚಲನಚಿತ್ರದಿಂದಾಗಿ ಜಗತ್ ಪ್ರಸಿದ್ಧಿ ಪಡೆಯಿತು. ರಾಜಕೀಯ ವಿಷಯಗಳ ಬಗ್ಗೆ ವಿಶೇಷ ಕಾಳಜಿ ವಹಿಸಿದ್ದ ಇಬ್‌ನೆಸ್‌ನ ಸಣ್ಣ ಕಥೆ A Serbian nights ನ ಅನುವಾದವಿದು.)

---

ನೀಳಾದೇವಿ, ೮೫, .೧೦ನೇ ಮೇನ್, ೧೩ನೇ ಕ್ರಾಸ್, ಮಲ್ಲೇಶ್ವರ, ಬೆಂಗಳೂರು - ೩

# ತೇನ್ ಜಿನ್ ತ್ಸುಂಡೆಯ ಟಿಬೇಟೀ ಕವಿತೆಗಳು

ಅನು : ಸೌಮ್ಯ

## ನನ್ನ ಟಿಬೇಟೀತನ

ದೇಶಾಂತರದಲ್ಲಿ ಬದುಕು ಸವೆಸುತ್ತಲೇ
ಮೂವತ್ತೊಂಬತ್ತು ವರ್ಷಗಳಾದವು.
ಒಂದು ದೇಶವಾದರೂ ಬೆಂಬಲಿಸುತ್ತಿಲ್ಲ
ಒಂದೇ ಒಂದು ದರಿದ್ರ ದೇಶವಾದರೂ.

ನಾವಿಲ್ಲಿ ನಿರಾಶ್ರಿತರು
ಕಳೆದು ಹೋದ ದೇಶವೊಂದರ ಜನರು
ಟಿಬೆಟನ್ನರು : ಪ್ರಪಂಚದ ಕರುಣೆಗೆ ಪಾತ್ರರು,
ಶಾಂತ ಮುನಿಗಳು, ಮೋಡಿ ಮಾಡುವ ಸಂಪ್ರದಾಯ
ವಾದಿಗಳು - ಒಂದು ಲಕ್ಷದ ಮೇಲೆಷ್ಟೋ ಸಾವಿರ
ಎಲ್ಲೆಲ್ಲೋ ಸೇರಿಹೋದವರು.
ಅಗಾಧ ಜೀರ್ಣಶಕ್ತಿಯ ಸಾಂಸ್ಕೃತಿಕ
ದಬ್ಬಾಳಿಕೆಗಳೆಷ್ಟೊಂದರಲ್ಲಿ
ಮುಳುಗಿ ಹೋದವರು.

ಎಲ್ಲ ಉಕ್ಕಡಗಳಲ್ಲು, ಕಛೇರಿಗಳಲ್ಲು
ನಾನೊಬ್ಬ ಭಾರತೀಯ ಟಿಬೆಟನ್
ತಪ್ಪದೆ ವರ್ಷಕ್ಕೊಂದು ಸಲ ನವೀಕರಿಸುತ್ತೇನೆ
ರಿಜಿಸ್ಟ್ರೇಶನ್ ಸರ್ಟಿಫಿಕೇಟನ್ನು
ಸಲಾಮು ಹಾಕಿ-
ಭಾರತದಲ್ಲಿ ಹುಟ್ಟಿದ ವಿದೇಶೀಯ.

ಭಾರತೀಯತೆಯೇ ಹೆಚ್ಚಾಗಿದೆ ನನ್ನಲ್ಲಿ
ಚೀನೀ ಚಹರೆಯ ಹೊರತು
ನೇಪಾಳೀ, ಥಾಯ್, ಮಣಿಪುರಿ?
ಜಪಾನೀ, ಚೀನೀ, ನಾಗಾ?
ಟಿಬೆಟನ್ ಎಂಬ ಪ್ರಶ್ನೆಯೇ ಇಲ್ಲ.

ನಾನು ಟಿಬೆಟನ್, ಟಿಬೆಟ್ಟಿನವನಲ್ಲ
ಒಮ್ಮೆಯಾದರೂ ಆ ನೆಲದ ಮೇಲೆ
ಕಾಲಿಟ್ಟಿಲ್ಲ. ಆದರೂ ಅಲ್ಲಿ ಸಾಯುವ ಕನಸು
ಕಾಣುವುದು ತಪ್ಪಿಲ್ಲ

## ಒಂದು ಆತ್ಮಶೋಧ

ಲಡಕ್‌ನಿಂದ ಟಿಬೇಟು ಕಣ್ಣಳತೆಯ ದೂರ
ಅವರು ಹೇಳಿದರು-
ಆ ಕಪ್ಪು ಗುಡ್ಡ ಉಂಟಲ್ಲ-ಡಂಸೇಯಲ್ಲಿ
ಅದರಾಚೆಗೆಲ್ಲ ಟಿಬೇಟು.

ಮೊದಲ ಸಲ ನಾನು ನನ್ನ ಟಿಬೇಟನ್ನು ಕಂಡೆ
ಓಡಿ ಓಡಿ ಆ ದಿಬ್ಬವೇರಿದೆ.
ಆ ಮಣ್ಣ ಮೂಸಿದೆ
ಮುದಿ ಕಾಡುಕೊಕ್ಕರೆಗಳ
ಶುಷ್ಕ ಗಾಳಿಯ ಸದ್ದು ಕೇಳಿದೆ

ಎಷ್ಟು ನೋಡಿದರೂ
ಗಡಿ ಮಾತ್ರ ಕಾಣಲೇ ಇಲ್ಲ.
ದೇವರಾಣೆಗೂ ಇಲ್ಲಿಗೂ ಅಲ್ಲಿಗೂ
ಎಂಥ ವ್ಯತ್ಯಾಸವೂ ಇಲ್ಲ

ನಾನು ಅಲ್ಲಿದ್ದೆನೋ
ಇಲ್ಲಿದ್ದೆನೋ ತಿಳಿಯಲೇ ಇಲ್ಲ
ನಾನು ಇಲ್ಲಿದ್ದೆನೋ
ಅಲ್ಲಿದ್ದೆನೋ ತಿಳಿಯಲೇ ಇಲ್ಲ

ಕತ್ತೆ 'ಕಯಾಂಗ್'
ಚಳಿಗಾಲ ಬಂತೆಂದರೆ ಇಲ್ಲಿಗೆ ಬಂದು ಬಿಡುವುದು
ಬೇಸಿಗೆ ಬಂತೆಂದರೆ
ಅಲ್ಲಿಗೆ ಹೋಗಿಬಿಡುತ್ತದೆ
ಎಂದು ಅವರು ಹೇಳಿದರು.

## ಬಳಲಿಕೆ

ನಾನು ಬಳಲಿದ್ದೇನೆ
ಮಾರ್ಚ್ ಹತ್ತರ ಆ ಕರ್ಮಗಳನ್ನು ಆಚರಿಸುತ್ತಾ
ಧರ್ಮಶಾಲಾದ ಬೆಟ್ಟಗಳಿಂದ ಆಕ್ರಂದನ ಮಾಡುತ್ತಾ

ನಾನು ಬಳಲಿದ್ದೇನೆ
ನಲವತ್ತು ವರ್ಷಗಳ ಕಾಲ ಧೂಳು ಉಗುಳುಗಳಲ್ಲಿ
ರಸ್ತೆಯಂಚಲ್ಲಿ ಸ್ವೆಟರ್‌ಗಳ ಮಾರುತ್ತಾ ಕೂತು
ಕಾಯುತ್ತಾ.

ನಾನು ಬಳಲಿದ್ದೇನೆ
ಅಕ್ಕಿ-ಬೇಳೆಯ ತಿಂದು
ಕರ್ನಾಟಕದ ಅಡವಿಗಳಲ್ಲಿ
ದನಮೇಯಿಸುತ್ತಾ

ನಾನು ಬಳಲಿದ್ದೇನೆ
'ಮಂಜುತಿಲ'ದ
ಕೊಳಕಿನ ಮೇಲೆ ನನ್ನ
ಧೋತ್ರವನ್ನು ಎಳೆದುಕೊಂಡು
ನಡೆದೂ ನಡೆದೂ

ನಾನು ಬಳಲಿ ಹೋಗಿದ್ದೇನೆ
ನಾನು ಕಂಡೇ ಇರದ
ನಾಡಿಗಾಗಿ
ಹೋರಾಡಿ, ಹೋರಾಡಿ.

## ಮುಂಬಯಿಯಲ್ಲೊಬ್ಬ ಟಿಬೇಟನ್

ಮುಂಬಯಿಯಲ್ಲಿ ಟಿಬೆಟನ್
ವಿದೇಶೀಯನಲ್ಲ
ಆ 'ಚೀನೀ ಟೇಕ್ ಅವೇ'ನಲ್ಲಿ
ಅವನು ಅಡುಗೆಯವ
ಬೀಜಿಂಗ್‌ನಿಂದ ಓಡಿ ಬಂದವನು
ಅಂದುಕೊಳ್ಳುತ್ತಾರೆ ಅವರು

ಬೇಸಗೆಯಲ್ಲಿ ಪರೇಲ್ ಬ್ರಿಡ್ಜಿನ ನೆರಳಲ್ಲಿ
ಸ್ವೆಟರ್ ಮಾರುತ್ತಾನೆ.

ರಿಟೈರ್ ಆದ ಬಹದ್ದೂರ್ ಇವನು
ಅಂದುಕೊಳ್ಳುತ್ತಾರೆ ಅವರು.

ಮುಂಬಯಿಯಲ್ಲಿನ ಟಿಬೇಟನ್
ಬೊಂಬಾಯಿ ಹಿಂದಿಯಲ್ಲಿ ಬಯ್ಯುತ್ತಾನೆ.
ಒಂಚೂರು ಟಿಬೇಟನ್ ಉಚ್ಚಾರದಲ್ಲಿ
ತುರ್ತಿನಲ್ಲಿ ಸಹಜವಾಗಿಯೇ ಟಿಬೇಟಿನ್ ಆಗಿ,
ಪಾರಸೀಕರು ನಗೆಯಾಡಿದಾಗ

ಮುಂಬಯಿಲ್ಲಿನ ಟಿಬೇಟನ್
'ಮಿಡ್ ಡೇ' ಪತ್ರಿಕೆಯ ಹಾಳೆ ತಿರುವುವುದನ್ನು
ಇಷ್ಟಪಡುತ್ತಾನೆ. ಎಫ್. ಎಂ. ಅನ್ನು ಪ್ರೀತಿಸುತ್ತಾನೆ.
ಆದರೆ ಒಂದೇ ಒಂದು ಟಿಬೇಟನ್ ಹಾಡು
ಬರುವುದೆಂದು ನಿರೀಕ್ಷಿಸುವುದಿಲ್ಲ.

ಇವನು ಸಿಗ್ನಲ್‌ನಲ್ಲಿ ಬಸ್ ಹಿಡಿಯುತ್ತಾನೆ
ಚಲಿಸುತ್ತಿರುವ ರೈಲು ಹತ್ತುತ್ತಾನೆ
ಉದ್ದದ ಕತ್ತಲಗಲ್ಲಿಯಲ್ಲಿ ಸಾಗುತ್ತಾನೆ
ತನ್ನ ಖೋಲಿಯಲ್ಲಿ ಒರಗುತ್ತಾನೆ

ತನ್ನನ್ನು ನೋಡಿ ಚಿಂಗ್-ಚೋಂಗ್-ಪಿಂಗ್-ಪಾಂಗ್
ಎಂದು ನಕ್ಕರೆ, ನಗುವವರ ಮೇಲೆ
ಕೋಪಗೊಳ್ಳುತ್ತಾನೆ.

ಮುಂಬಯಿಯಲ್ಲಿನ ಟಿಬೇಟನ್ ಈಗ
ದಣಿದಿದ್ದಾನೆ. ಅವನ ಕಣ್ಣಿಗಿಷ್ಟು ನಿದ್ದೆ
ಬೇಕು. ಇಷ್ಟು ಕನಸು ಬೇಕು.
ಹನ್ನೊಂದು ಘಂಟೆಯ
ವಿರಾರ್ ಎಕ್ಸ್‌ಪ್ರೆಸ್‌ನಲ್ಲಿ ಅವನು
ಹಿಮಾಲಯಕ್ಕೆ ಹೋಗುತ್ತಾನೆ.
ಬೆಳಗ್ಗೆ ಎಂಟೂ ಐದರ ಫಾಸ್ಟ್ ಲೋಕಲ್
ಅವನನ್ನು ಮರಳಿ ಚರ್ಚ್‌ಗೇಟ್‌ಗೆ ತಂದು
ಮೆಟ್ರೋ ಹತ್ತಿಸುತ್ತದೆ-
ಹೊಸ ಸಾಮ್ರಾಜ್ಯಕ್ಕೆ.

---

ಸೌಮ್ಯ, ಪ-೧ಳ, ನಂ. ೫೨೬, ಜಯನಗರ, ಕೋಲಾರ-೫೬೩೧೦೧

## ಚರ್ಚ್‌ಬೆಲ್

ಮರಾಠಿ ಮೂಲ : ಫಾದರ್ ಫ್ರಾನ್ಸಿಸ್ ದಿಬ್ರಿಟೋ
ಅನು : ಡಾ. ಅಮೃತ ರಾ. ಯಾರ್ದಿ

ಊರಿನಲ್ಲಿರುವವರೆಲ್ಲರೂ ರೈತರು, ಕೆಲವರು ಬಡವರು, ಕೆಲವರು ಶ್ರೀಮಂತರು, ಭೂಮಿಹೀನರಾರೂ ಇರಲಿಲ್ಲ. ಅಲ್ಲಿನ ಮುಖ್ಯ ಬೆಳೆ ಬಾಳೆಹಣ್ಣು, ಭತ್ತದ ಗದ್ದೆಗಳೂ ಇದ್ದವು. ಬೆಳೆಯುವ ಕಾಯಿ ಪಲ್ಲೆಯನ್ನು ವಾರದ ಪೇಟೆಯಲ್ಲಿ ಮಾರಲಾಗುತ್ತಿತ್ತು. ಶ್ರೀಮಂತ ರೈತರ ಕೊಟ್ಟಿಗೆ ತುಂಬಾ ಎಮ್ಮೆಗಳಿದ್ದವು. ಮನೆಯ ಒಡೆಯ ಉತ್ತರರಾತ್ರಿಯಲ್ಲಿ ಶಹರಕ್ಕೆ ಹೊರಡುತ್ತಿದ್ದ. ಶಹರದ ಸಂಪರ್ಕ ಅಷ್ಟಕ್ಕಷ್ಟೆ.

ಆ ಊರು ತನ್ನಲ್ಲಿಯೆ ರಮಿಸಿತ್ತು. ಊರಿಗೆ ಬಸ್ಸಿನ ಸೌಕರ್ಯವಿರಲಿಲ್ಲ. ಬಸ್ಸಿಗಾಗಿ ಮೂರು ಕಿಲೋಮೀಟರ್ ನಡೆದು ಹೋಗಬೇಕಾಗುತ್ತಿತ್ತು.

ಊರಿನಲ್ಲಿ ವಿದ್ಯುತ್ ವ್ಯವಸ್ಥೆ ಕೂಡ ಆಗಿರಲಿಲ್ಲ. ಆದ್ದರಿಂದ ದೀಪ ಹಚ್ಚುವ ಹೊತ್ತಿಗೆ ಎಲ್ಲ ವ್ಯವಹಾರಗಳು ನಿಲ್ಲುತ್ತಿದ್ದವು. ಊರಿನಲ್ಲಿ ಒಂದೇ ರೇಡಿಯೊ ಇತ್ತು. ಆದರೆ, ಇಡೀ ಊರಿಗೆ ಅದು ಸಾಕಾಗಿತ್ತು. ರಾತ್ರಿಯ ಒಂಬತ್ತು ಒಂಬತ್ತುವರೆ ಅಂದರೆ ಎಲ್ಲವೂ ಶಾಂತವಾಗುತ್ತಿತ್ತು.

ಎಮ್ಮೆ ಕರಗಳಿಗೆ ಹಾಲು ಉಣಿಸಲಿಕ್ಕೆ ರಾತ್ರಿ ಎರಡು ಗಂಟೆಗೆ ಏಳಬೇಕಾಗುತ್ತಿತ್ತು ಅಂತ ಎಲ್ಲರೂ ಬೇಗನೆ ಮಲಗುತ್ತಿದ್ದರು. ಗೂಡಿನಲ್ಲಿಯ ಗುಬ್ಬಿಯಂತೆ ಇಡೀ ಊರು ಸುಮ್ಮನಾಗುತ್ತಿತ್ತು.

ಎಲ್ಲೆಡೆ ನೀರವ ಶಾಂತತೆ. ಮಧ್ಯರಾತ್ರಿಯಲ್ಲಿ ನರಿಗಳು ಕೂಗುತ್ತಿದ್ದುದು ಕಿವಿ ಮೇಲೆ ಬೀಳುತ್ತಿತ್ತು. ಆಗ ಬಹಳ ಹೆದರಿಕೆಯಾಗುತ್ತಿತ್ತು. ಆ ನರಿಗಳು ಕಿವಿಗೆ ಸಮೀಪಿಸಿ ವಾಸನೆ ತೆಗೊಳ್ಳುತ್ತಾವೇನೋ ಎಂದು ನಾನು ತಲೆಯ ಮೇಲೆ ಚಾದರ ಹೊದ್ದುಕೊಳ್ಳುತ್ತಿದ್ದೆ. ಕೊಟ್ಟಿಗೆಯಲ್ಲಿನ ಎಮ್ಮೆಗಳು ತಮ್ಮ ಕೋಡುಗಳಿಂದ ಕಂಬದ ಮೇಲೆ ತಿಕ್ಕಿ ಸಪ್ಪಳ ಮಾಡುತ್ತಿದ್ದವು. ನಡುವೆ ನಾಯಿಗಳು ಕಿರುಚುತ್ತ ಬೊಗಳುತ್ತ ಹೋಗುತ್ತಿದ್ದವು. ಒಣಗಿದ ತೆಂಗಿನಕಾಯಿ ಧಪ್ಪೆಂದು ಬಾಳೆಯ ತೋಟದಲ್ಲಿ ಬೀಳುತ್ತಿತ್ತು. ಕೆಲವೊಮ್ಮೆ ಎಳ ನೀರಿನ ಕಾಯಿ ಛಪ್ಪರದ ಮೇಲಿಂದ ಕೆಳಗೆ ಜಾರಿ ನೀರಿನ ಹೊಂಡದಲ್ಲಿ ಬಿದ್ದಾಗ 'ದಬಕ್' ಎಂದು ಶಬ್ದ ಹೊರಡುತ್ತಿತ್ತು. ಆಗ ಪಲ್ಲಂಗದ ಮೇಲಿದ್ದ ಅಜ್ಜಿ, 'ದೆವ್ವಗಳು ಸ್ನಾನಕ್ಕೆ

ಹೊರಟಾವ, ಗೊತ್ತಾ?' ಅನ್ನುತ್ತಿದ್ದಳು. ಆಗ ನಾವು ಗಪ್ಪಾಗಿ ಬಿಡುತ್ತಿದ್ದೆವು. ನಂತರ, 'ದೇಗುಲದ ಘಂಟೆಗಳ ಧ್ವನಿ ಕೇಳಿ ದೆವ್ವಗಳು ಹೆದರಿ ಓಡಿ ಹೊಗ್ತಾವ' ಎಂದು ಅಜ್ಜಿ ಹೇಳುತ್ತಿದ್ದಳು. ದೆವ್ವಗಳನ್ನು ಓಡಿಸುವ ಆ ಘಂಟಾನಾದ ಬಾಲ್ಯದಿಂದಲೆ ಮನಸ್ಸಿನಲ್ಲಿ ಮನೆ ಮಾಡಿದೆ.

ರವಿವಾರ ಮುಂಜಾವಿನಲ್ಲಿ ಚರ್ಚ್‌ನಲ್ಲಿ ಘಂಟಾನಾದ ಶುರು ಆಗುತ್ತದೆ. ಕೆಲವು ಚರ್ಚ್‌ಗಳಲ್ಲಿ ಮೊದಲನೆಯ ಗಂಟೆ ಮೂರೂವರೆ, ಮೂರು ಮುಕ್ಕಾಲಕ್ಕೆ ಆಗುತ್ತದೆ. ಕೆಲವುದರಲ್ಲಿ ನಾಲ್ಕೂ ಕಾಲಕ್ಕೆ. ನಂತರ ಸೂರ್ಯೋದಯದವರೆಗೆ ನಡ ನಡುವೆ ಚರ್ಚ್‌ನ ಘಂಟೆಗಳ ನಾದ ಕೇಳಿ ಬರುತ್ತದೆ. ಥಂಡಿಯ ದಿನಗಳಲ್ಲಂತೂ ಆಸುಪಾಸಿನ ಎಲ್ಲ ಘಂಟೆಗಳ ಧ್ವನಿಗಳು ಕೇಳಿಸುತ್ತಿದ್ದವು. ಪ್ರತಿಯೊಂದು ಚರ್ಚ್‌ನ ಘಂಟೆಯ ಧ್ವನಿ ಬೇರೆಯಾಗಿತ್ತು. ಆ ಘಂಟೆ ಯಾವ ಚರ್ಚ್‌ದ್ದು, ಎನ್ನುವದನ್ನು ಗುರುತಿಸಬಹುದಾಗಿತ್ತು.

ನನ್ನ ಊರಿನ ಚರ್ಚ್‌ನಲ್ಲಿ ಪೋರ್ಚುಗೀಸರ ಕಾಲದ ಎರಡು ಘಂಟೆಗಳಿವೆ. ಒಂದು ವಿಶಾಲವಾದದ್ದು, ಇನ್ನೊಂದು ಅದಕ್ಕಿಂತ ಸಣ್ಣದು. ಎರಡರ ನಾದಗಳಲ್ಲಿ ಬಹಳ ವ್ಯತ್ಯಾಸ. ಒಂದರ ನಾದ ಘರಂದಾಜ ಗಾಯಕನಂತೆ ತೀಕ್ಷ್ಣ ಮತ್ತು ಭಾರದಸ್ತ. ಎರಡನೆಯದರ ನಾದ ಕಿಶೋರಿಯ ಹಾಡಿನಂತೆ ಮಂಜುಳವಾಗಿತ್ತು. ಹಬ್ಬದ ದಿನ ಎರಡೂ ಘಂಟೆಗಳು ಏಕಕಾಲಕ್ಕೆ ಬಾರಿಸಲಾಗುತ್ತವೆ. ಸರ್ಪ ಮತ್ತು ಸರ್ಪಿಣಿ ಒಂದಾದಾಗ ಸುತ್ತಿಕೊಳ್ಳುವ ಹಾಗೆ ಅಥವಾ ಎರಡು ಬಳ್ಳಿಗಳು ಒಂದರಲ್ಲಿ ಇನ್ನೊಂದು ಕೂಡಿಕೊಳ್ಳುವ ಹಾಗೆ ಆ ನಾದಗಳು ಕೂಡಿಕೊಂಡು ಮೂರನೆಯ ನಾದ ಹುಟ್ಟಿಸುತ್ತವೆ. ಆ ನಾದ ಕಿವಿಮೇಲೆ ಬಿದ್ದಾಗ ಮನಸ್ಸಿನಲ್ಲಿ ಆನಂದದ ಕಾರಂಜಿ ಚಿಮ್ಮುತ್ತದೆ. ಆಷಾಢದ ಮೋಡಗಳನ್ನು ನೋಡಿದಾಗ ನವಿಲು ಸಪ್ತವರ್ಣಗಳ ಇಂದ್ರಧನುಷ್ಯದ ಕನಸು ಕಂಡು ನರ್ತಿಸುವ ಹಾಗೆ ಮನ ನವಿಲು ಪುಕ್ಕವನ್ನು ಪೂರ್ಣ ಪಸರಿಸಿ ನರ್ತಿಸುತ್ತದೆ.

ಏಸುಕ್ರಿಸ್ತನ ಜನ್ಮ ಅಥವಾ ಏಸುಕ್ರಿಸ್ತನ ಪುನರುತ್ಥಾನದ ದಿನ ಈ ಎರಡು ಘಂಟೆಗಳ ಮಧುರನಾದ ಕೇಳಿಸುತ್ತಿತ್ತು. ಇವೆರಡೂ ಸೃಜನದ ಉತ್ಸವಗಳು, ಕ್ರಿಸ್ತನ ಜನ್ಮದ ಸಮಯಕ್ಕೆ ಕೊಟ್ಟಿಗೆಯಲ್ಲಿನ ಆಕಳುಗಳು ಅಂಬರಿಸಲಾರಂಭಿಸಿದ್ದವು. ಪಕ್ಷಿಗಳು ಚಿಲಪಿಲಿಗುಟ್ಟುತ್ತಿದ್ದವು. ಜನರು ನತಮಸ್ತಕರಾಗಿ ಪ್ರಾರ್ಥನೆಯಲ್ಲಿ ತೊಡಗಿದರು. ಅದೇ ರೀತಿ ಸ್ವರ್ಗದಲ್ಲಿನ ಯಕ್ಷಕಿನ್ನರಗಳು ಮತ್ತು ದೇವದೂತರು ಆನಂದದಿಂದ ತಮ್ಮ ಅಮೃತಸ್ವರಗಳಲ್ಲಿ ಮಂಗಲ ಗೀತೆಗಳನ್ನು ಹಾಡಿದರು.

ಈಗ ಕ್ರಿಸ್‌ಮಸ್ ಹಬ್ಬದ ವೇಳೆಗೆ ಈ ಚರ್ಚ್‌ಬೆಲ್‌ಗಳು ದೇವದೂತರಿಂದ ಕಂಠವನ್ನು ಇಸಿದುಕೊಂಡು ಇಡೀ ಜಗತ್ತಿಗೆ ಕ್ರೈಸ್ತಜನ್ಮದ ಶುಭವಾರ್ತೆಯನ್ನು ಹೇಳುತ್ತವೆ. ಆತ್ಯಂತಿಕವಾದ ದುಃಖವು ಮೂಕವಾಗಿರುತ್ತದೆ. ಆದರೆ, ಅದು ಆತ್ಯಂತಿಕ ಆನಂದದ ಆವಿಷ್ಕಾರಕ್ಕಾಗಿ ಚಡಪಡಿಸುತ್ತಿರುತ್ತದೆ. ಚರ್ಚ್‌ಬೆಲ್‌ಗಳ ಮಂಜುಳ ಧ್ವನಿ ಅಂದರೆ, ಆನಂದದ ಸುಗ್ಗಿ.

ಘಂಟೆಗಳ ನಾದದಿಂದ ಮನಗಳು ಉಲ್ಹಸಿತಗೊಳ್ಳುತ್ತವೆ. ಚಿತ್ತವೃತ್ತಿಗಳು ಅರಳುತ್ತವೆ. ಆ ಸಂಗೀತವು ರಕ್ತದಲ್ಲಿ ಸೇರಿಕೊಳ್ಳುತ್ತದೆ. ಶ್ವಾಸದಿಂದ ಹೊರ ಚಿಮ್ಮುತ್ತದೆ.

ಈಸ್ಟರ್ ರಾತ್ರಿಯಲ್ಲಿ ನಿನಾದಿಸುವ ಘಂಟೆಗಳು ಮೃತ್ಯುಂಜಯನಾದ ಕ್ರೈಸ್ತನ ಪುನರುತ್ಥಾನದ ಖಾತ್ರಿ ನೀಡುತ್ತವೆ. ಕ್ರಿಸ್‌ಮಸ್ ಹಬ್ಬದ ತರಹ ಇದೂ ಆನಂದದ ಉತ್ಸವ. ಆದರೆ, ಈ ಆನಂದದ ಪರಿಯೆ ಬೇರೆ. ಇದು ವೇದನೆಯ ಗರ್ಭದಿಂದ ಹುಟ್ಟಿರುತ್ತದೆ.

ಕ್ರಿಸ್ತನಿಗೆ ಅಕಾಲದಲ್ಲಿ ಮೃತ್ಯುವನ್ನು ಎದುರಿಸಬೇಕಾಯಿತು. ಆ ಮೃತ್ಯು ಭೀಷಣವಾಗಿತ್ತು. ಆ ದುಃಖದ ನೆನಪಿಗಾಗಿ ಗುಡ್ ಫ್ರೈಡೆದಿಂದ ಈಸ್ಟರ್‌ವರೆಗೆ ಚರ್ಚ್‌ನಲ್ಲಿಯ ಎಲ್ಲ ಘಂಟಾನಾದಗಳು ಮೂಕ ಆಗುತ್ತವೆ. ಚರ್ಚ್‌ನ ಜೀವನದಲ್ಲಿ ಘಂಟಾನಾದಗಳಿಲ್ಲದ ಆ ಎರಡು ದಿನಗಳು ಶೂನ್ಯ ಮನದಾಗಿರುತ್ತವೆ. ಪ್ರತಿದಿನ ಚರ್ಚ್‌ಬೆಲ್ ಕೇಳುವ ಅಭ್ಯಾಸ ಆಗಿರುವುದರಿಂದ ಆವಾಗ ಅಸ್ವಸ್ಥ ಅನಿಸುತ್ತದೆ. ಹೃದಯದ ಬಡಿತ ನಿಂತ ಹಾಗೆ ಅನಿಸುತ್ತದೆ. ಮಂದಿರದ ಘಂಟಾನಾದ ನಿಂತಿತು ಅಂದರೆ, ಸಮಾಜಪುರುಷನ ಉಸಿರುಗಟ್ಟಿದ ಹಾಗೆ ಅನಿಸುತ್ತದೆ.

ಈಸ್ಟರನ ಪೂರ್ವರಾತ್ರಿಯಲ್ಲಿ ಪ್ರಾರ್ಥನೆ ಆರಂಭವಾಗುತ್ತದೆ. ಬೇಕಂತಲೆ, ದೀಪಗಳನ್ನು ಆರಿಸಿ ಕತ್ತಲ ಮಾಡುತ್ತಾರೆ. ಸರಿಯಾಗಿ ೧೨ ಗಂಟೆಗೆ ಘಂಟಾನಾದ ನಿನದಿಸುತ್ತದೆ. ಎರಡು ದಿನಗಳ ನಂತರ, ಕಿವಿಯ ಮೇಲೆ ಮತ್ತೆ ಸ್ವರಗಳು ಬೀಳುತ್ತವೆ. ಮರಣದ ನಂತರ ತೆರಳಿದ ಅದೊಂದು ನವ ಜೀವನದ ಆನಂದ. ಕ್ರಿಸ್‌ಮಸ್ ಹಬ್ಬದ ಆನಂದ ನವನಿರ್ಮಿತಿಯದ್ದಾಗಿದ್ದರೆ, ಈಸ್ಟರನ ಆನಂದವು ಪುನರ್ನಿರ್ಮಿತಿಯದ್ದಾಗಿರುತ್ತದೆ. ಕ್ರಿಸ್‌ಮಸ್ ಹಬ್ಬವು ಜನ್ಮೋತ್ಸವ ಇದ್ದರೆ, ಈಸ್ಟರ್ ಪುನರ್ಜನ್ಮದ ಉತ್ಸವ! ಯಾವನು ಒಬ್ಬನಿದ್ದಾನೊ, ಆದರೆ  ಅವನಿಗೆ ಅನೇಕರಲ್ಲಿ ಇರಲು ಸೇರುವದೋ, ಅವನು ಕ್ರಿಸ್‌ಮಸ್  ದಿನ ಹುಟ್ಟುತ್ತಾನೆ. ಯಾವನು ಪಾರ್ಥಿವನಿದ್ದನೊ, ಆತ ಮೃಣ್ಮಯತೆಯ  ಸಂಬಂಧ ಕಳಚಿ ಈಸ್ಟರ್‌ನ ದಿನ ಚಿರಂತನನಾಗುತ್ತಾನೆ. ಅಂತೆಯೇ ಕ್ರೈಸ್ತರ ಜೀವನದಲ್ಲಿ ಈ ಎರಡೂ ದಿನಗಳು  ಅತ್ಯಂತ  ಮಹತ್ವಪೂರ್ಣವಾಗಿವೆ.  ಆನಂದ ಒಂದೆ, ಆದರೆ ಅದರ ಪರಿ ಬೇರೆ.

ಹೇಗೆ ಗರ್ಭದ ನೆಂಟು ನಾಳಿನ ಜೊತೆ ಇರುತ್ತದೆಯೊ, ಅದೇ ರೀತಿ ಕ್ರೈಸ್ತ ಮನುಷ್ಯನ ನೆಂಟು ಘಂಟೆಯ ನಾದದ ಜೊತೆಗೆ ಇರುತ್ತದೆ. ಹುಟ್ಟು, ಮದುವೆ ಮತ್ತು ಸಾವು ಈ ಮೂರು ಪ್ರಸಂಗಗಳಲ್ಲಿ ಆ ಘಂಟಾನಾದ ನಿನದಿಸುತ್ತಿರುತ್ತದೆ. ಕ್ರೈಸ್ತ ಕೂಸಿನ ಜನ್ಮದ ವೇಳೆಗೆ ಚರ್ಚ್‌ನಲ್ಲಿ ಆನಂದ ಸೂಚಕ ಘಂಟೆ ಬಾರಿಸಲಾಗುತ್ತದೆ! ಹೊಸದಾಗಿ ಹುಟ್ಟಿದ ಕೂಸು  ತನ್ನ ಮುಚ್ಚಿದ ಮುಷ್ಟಿಯಲ್ಲಿ ಆಸೆಯ ವರವನ್ನು ಪಡೆದುಕೊಂಡು ಬಂದಿರುತ್ತದೆ. ಆ ಮಗು ಕೇವಲ ತಂದೆ ತಾಯಿಗಳವರದಷ್ಟೆ ಅಲ್ಲ, ಸಮಾಜದ್ದೂ ಇರುತ್ತದೆ. ಆದ ಕಾರಣ ಅದರ ಹುಟ್ಟಿನ ವಾರ್ತೆ ಇಡೀ ಸಮಾಜಕ್ಕೆ ತಿಳಿಸಲಾಗುತ್ತದೆ.

ಋಣಾನುಬಂಧದ ಗಂಟುಗಳು ಕೂಡಿದಾಗ, ದೇವರೆದುರು ಧರ್ಮಗುರುಗಳ ಸಾಕ್ಷಿಯಲ್ಲಿ, ಮಾತುಗಳ, ಉಂಗುರಗಳ ವಿನಿಮಯವಾಗುತ್ತದೆ. ಆ ಸಮಯದಲ್ಲಿ ಕೂಡ ಘಂಟಾನಾದ ಆಗುತ್ತದೆ. ಮಹದಾಸೆಯಿಂದ ಮತ್ತು ಮಹದಪೇಕ್ಷೆಯಿಂದ ಎರಡು ಜೀವಗಳು ಹೊಸ ಪ್ರವಾಸವನ್ನು ಆರಂಭಿಸುತ್ತವೆ. ಅವಳು ಅವನಿಗೆ ಬೆಳಗ್ಗೆ ಕೊಟ್ಟಿರುವ ಹೂಗಳು ಸಂಜೆಯ ಹೊತ್ತಿಗೆ ನಿರ್ಮಾಲ್ಯದ ರೂಪ ತಾಳಿರುತ್ತವೆ. ಆದರೂ ಆ ಹೂಗಳ ಭರವಸೆಯ ಮೇಲೆಯೆ ಆ ಎರಡೂ ಜೀವಗಳು ಬಾಳಿನ ಪ್ರವಾಸದ ಪ್ರತಿಜ್ಞೆ ಮಾಡಿರುತ್ತವೆ. ಅದನ್ನು ನೋಡಿ ಚರ್ಚ್‌ಬೆಲ್‌ಗಳ ಆನಂದ ಇಮ್ಮಡಿಯಾಗುತ್ತದೆ. ಅವು ಆ ಆನಂದವನ್ನು ಇಡೀ ಊರಿನ ಜೊತೆಯಲ್ಲಿ ಹಂಚಿಕೊಳ್ಳುತ್ತವೆ.

ಚರ್ಚ್‌ನಲ್ಲಿ ಯಾರದ್ದಾದರೂ ಸತ್ಕಾರ ಸಮಾರಂಭವಾದರೆ, ಆ ಘಂಟೆಯು ಆ ಸುದ್ದಿಯನ್ನು ಮೊದಲು, ಮನೆಮನೆಗೆ ಮುಟ್ಟಿಸುತ್ತದೆ. ಸುಗಂಧವನ್ನು ಮುಚ್ಚಿಡಲು ಸಾಧ್ಯವಿಲ್ಲ. ಆನಂದದ ಬಗೆಯೂ ಅದೆ. ಇದು ಚರ್ಚ್ ಬೆಲ್‌ಗಳಿಗೆ ಚೆನ್ನಾಗಿ ಗೊತ್ತಿದೆ. ಅವು ಆನಂದದ ಸುದ್ದಿಯನ್ನು

ಎಲ್ಲೆಡೆ ಹರಡಿಸುತ್ತವೆ. ಅವುಗಳಿಗೆ ಪಿಸುಮಾತು ಗೊತ್ತಿಲ್ಲ. ಏನೇ ಹೇಳಬೇಕೆಂದರೂ ಎಲ್ಲರೂ ಕೇಳುವಂತೆ ಹೇಳುತ್ತವೆ.

ಜಗತ್ತಿಗೆ ಆನಂದ ನೀಡುತ್ತಿರುವಾಗ ಘಂಟೆ ಬಹಳಷ್ಟು ಕಷ್ಟಗಳನ್ನನುಭವಿಸಬೇಕಾಗುತ್ತದೆ. ತನ್ನ ಹೃದಯದ ಮೇಲೆ ಬೀಳುವ ಬಡೆತಗಳನ್ನು ಸಹಿಸಬೇಕಾಗುತ್ತದೆ. ಅದು ಇಲ್ಲದಿದ್ದರೆ, ಆನಂದದ ಕ್ಷೀಣವಾದ ತರಂಗ ಕೂಡ ಏಳಲಿಕ್ಕೆ ಸಾಧ್ಯವಿಲ್ಲ. ಸುಖದ ಪುಷ್ಪಗಳು ವೇದನೆಯ ಬಳ್ಳಿಯ ಮೇಲೆ ಅರಳುತ್ತವೆ. ಶ್ರೀಮತಿ ಮೇರಿ ಮೆಕ್ಲೋ ಇವರು ಬರೆದ 'ದ ಥಾರ್ನ್ ಬರ್ಡ್' ಎಂಬ ಕಾದಂಬರಿಯಲ್ಲಿ ಮುಳ್ಳಿನ ಪಕ್ಷಿಗೆ ಸಂಬಂಧಪಟ್ಟ ಒಂದು ಐರಿಷ್ ಜಾನಪದ ಕಥೆ ಬರುತ್ತದೆ. ಅದು ಹೀಗೆ :

ಆ ಪಕ್ಷಿ ಆಯುಷ್ಯದಲ್ಲಿ ಒಂದೆ ಸಲ ಹಾಡುತ್ತದೆ. ಹಾಡುವ ಸಮಯ ಸಮೀಪಿಸಿದಾಗ ಅದು ತೀಕ್ಷ್ಣವಾದ ಮುಳ್ಳಿನ ಕಂಟೆಗಳನ್ನು ಹುಡುಕುತ್ತದೆ. ತೀಕ್ಷ್ಣವಾದ ಮುಳ್ಳು ಅದಕ್ಕೆ ಸಿಕ್ಕಾಗ ಅದು ಅದರ ಮೇಲೆ ಧುಮುಕುತ್ತದೆ. ಆ ಮುಳ್ಳು ಅದರ ಎದೆಯನ್ನು ಭೇದಿಸಿ ಬೆನ್ನಿನಿಂದ ಹೊರಗೆ ಬಂದಾಗ, ಅದರ ಕಂಠದಿಂದ ಅಪ್ರತಿಮ ಸ್ವರಗಳು ಹೊರ ಬರುತ್ತವೆ. ಇಡೀ ಸೃಷ್ಟಿಯು ಆ ಹಾಡನ್ನು ಮೈ ತುಂಬಿದ ಕಿವಿಗಳಿಂದ ಕೇಳುತ್ತದೆ. ದೇವರು ಸ್ವರ್ಗದಿಂದ ಮಂದಸ್ಮಿತ ಸೂಸುತ್ತಾರೆ.

ವೇದನೆಯ ಹೊರತು ಆನಂದದ ನಿರ್ಮಿತಿ ಸಾಧ್ಯವಾಗದು. ಆನಂದವು ಎಷ್ಟು ಸಾತ್ವಿಕ ಮತ್ತು ಶುದ್ಧವೊ ಆ ವೇದನೆಯು ಅಂತಃಕರಣಕ್ಕೆ ಅಷ್ಟು ತೀಕ್ಷ್ಣವಾದುದು. ತೀಕ್ಷ್ಣ ವೇದನೆಯನ್ನು ಹೊರತು ಪಡಿಸಿ ಹುಟ್ಟಿದ ಆನಂದಕ್ಕೆ ಭವಿಷ್ಯವಿರುವುದಿಲ್ಲ. ಅದು ಬಂಜೆಯಾಗಿರುತ್ತದೆ. ಅಲ್ಪ ಜೀವಿಯಾಗಿರುತ್ತದೆ.

ಆತ್ಮ ಕ್ಲೇಶ ಸಹಿಸಿ ಆನಂದವನ್ನು ನಿರ್ಮಿಸುವ ಘಂಟಾನಾದ ಎಲ್ಲಿಯವರೆಗೆ ಕೇಳಿಸುತ್ತದೆಯೊ, ಅಲ್ಲಿಯವರೆಗೆ ಯಾರೂ ನಿರಾಶರಾಗಬೇಕಾಗಿಲ್ಲ. ಜಗತ್ತಿನ ಕಲ್ಯಾಣಕ್ಕಾಗಿ ತಮ್ಮ ದೇಹಕ್ಕೆ ಕಷ್ಟಕೊಡುವ ಈ ಘಂಟೆಗಳೆಂದರೆ 'ಸಂತರು' ಎಂದೇ ಹೇಳಬೇಕು!

'A Jouney along the oak' ಕವಿತೆಯಲ್ಲಿ ರಶಿಯಾದ ಕವಿ ಸೋಲ್ಜೆನಿತ್ಸಿನ್ ಹೇಳುತ್ತಾನೆ. "ಮನುಷ್ಯರು ಬಹಳ ಸ್ವಾರ್ಥಿಗಳು ಮತ್ತು ದುಷ್ಟರು. ಆದರೆ, ಚರ್ಚ್‌ಬೆಲ್ ಬಾರಿಸಿದ ನಂತರ ಅದರ ಪ್ರತಿಧ್ವನಿಯು, ಊರಿನಲ್ಲಿ, ಹೊಲಗದ್ದೆಗಳಲ್ಲಿ, ಅರಣ್ಯಗಳಲ್ಲಿ ನಿನದಿಸುತ್ತಿತ್ತು. ಎಲ್ಲ ತಾಪಗಳನ್ನು ಒಂದು ಕ್ಷಣ ಬದಿಗಿಟ್ಟು, ಮನುಷ್ಯನು ಚಿರಂತನದ ಚಿಂತನೆ ಮಾಡಬೇಕು ಎಂಬ ಸಂದೇಶ ಆ ಘಂಟಾನಾದದಿಂದ ಸಿಗುತ್ತಿತ್ತು. ಈಗ ಸಂಧ್ಯಾಕಾಲದ ಘಂಟಾನಾದ ಕೇವಲ ಜಾನಪದ ಗೀತೆಯಲ್ಲಿ ಮಾತ್ರ ಉಳಿದಿದೆ. ದನಗಳಿಗಿಂತ ಮನುಷ್ಯ ಬೇರೆ ಎಂಬುದರ ಅರಿವು ಮಾಡಿಕೊಡಲು ಆ ಘಂಟಾನಾದವೆ ಸಹಾಯವಾಗುತ್ತಿತ್ತು.

ಚರ್ಚ್ ಬೆಲ್‌ಗಳ ನಿನಾದ ಮಂದವಾಯಿತು. ಆ ಪ್ರಸನ್ನವಾದ ನಾದ ನಿಂತಿತು. ಅದರ ಬದಲಾಗಿ ಕಿವಿಗಳನ್ನು ಕಿವುಡ ಮಾಡುವ ಉಗ್ರ ಸಂಗೀತ ಸೇರಿತು. ಘಂಟಾನಾದ ನಿಂತ ಮೇಲೆ ಮನುಷ್ಯನ ವಿವೇಕದ ಧ್ವನಿ ಕೂಡ ಸಾವಕಾಶವಾಗಿ ಕ್ಷೀಣಗೊಳ್ಳುತ್ತದೆ. ಮಂದಿರದ ಘಂಟೆಗಳ ನಾದದ ಸಂಬಂಧ ಮನುಷ್ಯನ ಹೃದಯದ ಬಡೆತದ ಜೊತೆಗೆ ಇದೆ. ಮನುಷ್ಯ ನಾಸ್ತಿಕನಾಗಿರಲಿ, ಆಸ್ತಿಕನಾಗಿರಲಿ, ಚರ್ಚ್‌ಗಳ ಘಂಟೆಗಳು ಬಾರಿಸಲೇಬೇಕು.

ಭಾರತೀಯ ಸಂಸ್ಕೃತಿಯಲ್ಲಿ 'ಓಂ' ಆದಿನಾದ ಎಂದು ನಂಬಿಕೆ. ಅದು ನಾದ ಬ್ರಹ್ಮದ ಮೊಟ್ಟ ಮೊದಲಿನ ಹುಂಕಾರ. ಈ ನಾದಬ್ರಹ್ಮವು ಈಗ ಘಂಟಾನಾದದ ರೂಪದಲ್ಲಿ ನಮ್ಮ ಕಿವಿಗಳಲ್ಲಿ ನಿನದಿಸುತ್ತದೆ.

ಬೆಳಗಿನ ಜಾವ, ಮಧ್ಯಾಹ್ನ ಮತ್ತು ಸಂಜೆ ಈ ಮೂರೂ ಪ್ರಹರಗಳಲ್ಲಿ ಪ್ರತಿನಿತ್ಯ, ನಿತ್ಯ ನೇಮದಿಂದ ಚರ್ಚ್‌ಬೆಲ್ಲಿನ ಘನಗಂಭೀರವಾದ ನಾದಗಳು ಹೊರಬರುತ್ತವೆ. ಊರಿನಲ್ಲಿ ಅದಕ್ಕೆ 'ಆವೆಮರಿ' ಅನ್ನುತ್ತಾರೆ. ಉತ್ಪತ್ತಿ, ಸ್ಥಿತಿ ಮತ್ತು ಲಯ, ಜೀವನದ ಚಿರಂತನ ಸಂಗೀತವಾಗಿದೆ. ಈ ಘಂಟೆಗಳ ಕಾರಣ ಅದು ನೆನಪಿಸುತ್ತದೆ. ಮೊದಲು ಗಡಿಯಾರಗಳಿರಲಿಲ್ಲ. ಆವಾಗ ಮಧ್ಯಾಹ್ನದ ವಿಶ್ರಾಂತಿಯ ಸೂಚನೆ 'ಆವೆಮರಿ'ಯ ನಾದದಿಂದಲೇ ಸಿಗುತ್ತಿತ್ತು.

ಮಧ್ಯಾಹ್ನದ ಘಂಟೆಯ ಮೊದಲನೆಯ ಧ್ವನಿ ಕಿವಿ ಮೇಲೆ ಬಿದ್ದ ಕ್ಷಣಕ್ಕೆ ಕೈಯಲ್ಲಿನ ಕೆಲಸವೆಲ್ಲ ಅಲ್ಲಿಯೆ ನಿಲ್ಲಿಸಬೇಕು. ಗುದ್ದಲಿ-ಸಲಿಕೆ ಇತ್ಯಾದಿ ಸಲಕರಣೆಗಳನ್ನು ಅಲ್ಲಿಯೆ ಇಟ್ಟು, ಒಂದು ಕ್ಷಣ ಮೌನವನ್ನಾಚರಿಸಿ ಚಿಂತನ-ಮನನ ಮಾಡಬೇಕು. ಮತ್ತೆ ಸಾಯಂಕಾಲ ಏಳು ಗಂಟೆಗೆ ಘಂಟಾನಾದ ಆದ ನಂತರ ರಂಟೆಯನ್ನು ಬಿಡಬೇಕು. ಎತ್ತಿನ ಭುಜದ ಮೇಲಿನ ರಂಟೆಯನ್ನು ಕೆಳಗೆ ಇಳಿಸಬೇಕು. ಒಂದು ಕ್ಷಣ ಧ್ಯಾನ ಮಗ್ನನಾಗಬೇಕು ಮತ್ತು ಮಡದಿಯ ಜೊತೆಯಲ್ಲಿ ಮನೆಯ ದಾರಿ ಹಿಡಿಯಬೇಕು.

ಬೆಳಗ್ಗೆ ಮೊದಲನೆಯ ಘಂಟೆಗೆ ಎಚ್ಚರಾಗಬೇಕು. ಮಡದಿ ಬಾವಿಯಿಂದ ನೀರನ್ನು ಸೇದಿ ತರುವಷ್ಟರಲ್ಲಿ ಗಂಡನು ಹಲ್ಲುಜ್ಜಿಕೊಂಡಿರಬೇಕು.

ಆಕಳ ಹಾಲನ್ನು ಕರೆಯುವಷ್ಟರಲ್ಲಿ ಚಹಾ ಕುಡಿಯುವುದು ಮುಗಿದಿರುತ್ತದೆ. ಬಿಸಿ ಚಹಾದ ಗುಟುಕುಗಳನ್ನು ಆನಂದಿಸುತ್ತಾ ಹೊಲದ ಹಾದಿ ಹಿಡಿಯಬೇಕು. ಮಧ್ಯಾಹ್ನದ ಘಂಟೆಯ ವೇಳೆಗೆ ಕೆಲಸಕ್ಕೆ ವಿಶ್ರಾಂತಿ. ಮಧ್ಯಾಹ್ನ ವಾಮಕುಕ್ಷಿ; ಮತ್ತೆ ಸಂಜೆಯ ಘಂಟಾನಾದದವರೆಗೆ ದುಡಿಯಬೇಕು.

ಯಾವಾಗಾದರೂ ಆಕಸ್ಮಾತ್ತಾಗಿ ಘಂಟಾನಾದ ಆಗುತ್ತದೆ. ದಮ್ಮು ಹತ್ತಿದ ಹಾಗೆ-ಸಂಕಟದ ಸೂಚನೆ ನೀಡಲಿಕ್ಕೆ. ಯಾರದಾದರೂ ಬಣಿವಿಗೆ ಬೆಂಕಿ ಹತ್ತಿರುತ್ತದೆ. ಯಾರದಾದರೂ ಮನೆಯ ಮೇಲೆ ದರೋಡೆಯ ಪ್ರಯತ್ನ ನಡೆದಿರುತ್ತದೆ. ಆ ಘಂಟಾನಾದದೊಡನೆ ಇಡೀ ಪರಿಸರ ಚರ್ಚಿನ ದಿಕ್ಕಿಗೆ ಓಡುತ್ತದೆ. ಆಪದ್‌ಗ್ರಸ್ತನಿಗೆ ಆಧಾರ ನೀಡಲು ಸಾವಿರಾರು ಜನ ಸೇರುತ್ತಾರೆ.

ಹಳ್ಳಿಯ ರೈತರ ಜೀವನದ ಇಡೀ ದಿನ ಚರ್ಚ್‌ಬೆಲ್ಲಿನ ತಾಳದ ಮೇಲೆ ನಡೆದಿರುತ್ತದೆ. ಆದರೆ, ಯಾವುದೊ ಒಂದು ದಿನ ಈ ಘಂಟೆಗಳ ಸ್ವರ ಅಳುಬುರಕ ಇರುತ್ತದೆ. ಗಾಳಿಯ ಗತಿ ಮಂದ ಆಗುತ್ತದೆ. ಪಕ್ಷಿಗಳ ಚಿಲಿ ಪಿಲಿ ನಿಲ್ಲುತ್ತದೆ. ಆಕಳುಗಳು ಅಂಬರಿಸುತ್ತವೆ. ನಾಯಿಗಳು ಅಳುತ್ತಿರುತ್ತವೆ. ಮನುಷ್ಯರು ದಿಕ್ಕು ತೋಚದಂತಾಗುತ್ತಾರೆ. ಘಂಟೆಯ ಸ್ವರಗಳು ಕರುಣವಾಗುತ್ತವೆ.

ಅದು ಯಾರದಾದರೂ ಕೊನೆಯುಸಿರಿನ ಸುದ್ದಿ ಇರುತ್ತದೆ. ಯಾರ ಹುಟ್ಟಿನ, ಮದುವೆಯ ಸುದ್ದಿ ಮುಟ್ಟಿಸಿತ್ತೊ ಅವನ ಅಂತಿಮ ಯಾತ್ರೆಯ ಸುದ್ದಿ ಮುಟ್ಟಿಸುವ ಉತ್ತರದಾಯಿತ್ವವು ಘಂಟೆಯ ಮೇಲೆ ಇರುತ್ತದೆ. ಈ ಆಕಸ್ಮಿಕ ಘಂಟಾನಾದ ಯಾತಕ್ಕಾಗಿ? ಯಾರು ಹೋಗಿರಬಹುದು? ಈ ರೀತಿ ಪ್ರಶ್ನೆಗಳು ಹುಟ್ಟುತ್ತವೆ.

ಈ ವಿಷಯದ ಬಗ್ಗೆ ಕಟುವಾದರೂ ಚಿರಂತನವಾದ ಒಂದು ಸತ್ಯವನ್ನು ಆಂಗ್ಲ ಕವಿ ಜಾನ್ ಡನ್ ಹೇಳಿದ್ದಾನೆ:

"And therefore never send to know for
whom the bell tolls,
It tolls for thee....!

ಯಾರಿಗಾಗಿ ಈ ಘಂಟಾನಾದ

ಎಂದು ಕೇಳಬೇಡ

ಆ ಘಂಟೆಗಳು ಕೊಡುತ್ತಿವೆ

ನಿನ್ನ ಮರಣದ ಸುದ್ದಿ.

ಮನುಷ್ಯನು ಏಕಾಂಗಿಯಾಗಿ ಬದುಕುವುದಿಲ್ಲ. ಅದೇ ರೀತಿ ಅವನು ಏಕಾಂಗಿಯಾಗಿ ಸಾಯುವುದಿಲ್ಲ.

ನಮ್ಮದು ಒಂದು ಸಾಮುದಾಯಿಕ ಶರೀರವಿರುತ್ತದೆ. ಗೆಳೆಯನ ಮರಣದ ವೇಳೆಯಲ್ಲಿ ನಮ್ಮ ಅಸ್ತಿತ್ವದ ಒಂದು ಭಾಗ ಸಾಯುತ್ತದೆ. ಅಂತೆಯೆ, ಮೃತ್ಯುಘಂಟೆಯ ನಾದ ಕೇಳಿದಾಗ ಹೃದಯದ ಬಡಿತ ಒಂದು ಕ್ಷಣ ನಿಲ್ಲುತ್ತದೆ.. "ಪಾಪ, ಹೋದ" ಈ ಶಬ್ದಗಳಿಂದ ಒಂದು ದೀಪವನ್ನು ಅಜ್ಞಾನ ಸಾಗರಕ್ಕೆ ಸೇರುವ ಗಂಗೆಯಲ್ಲಿ ಬಿಡಲಾಗುತ್ತದೆ. ಅಶ್ರುಸಿಕ್ತ ಕಣ್ಣುಗಳು ಒಣಗುತ್ತವೆ. ಶೋಕದ ಆಕಾಂತ ಮಂದವಾಗುತ್ತದೆ. ಎಲ್ಲರೂ ಮತ್ತೆ ಸಂಸಾರದ ಸಮುದ್ರದಲ್ಲಿ ಮುಳುಗಿ ಹೋಗುತ್ತಾರೆ.

ಇಂದಲ್ಲ ನಾಳೆ, ನಾನೂ ಹೋಗುವ ಸಮಯ ಬಂದೆ ಬರುತ್ತದೆ. ಒಂದು ದಿನ ಆಕಸ್ಮಿಕವಾಗಿ ಚರ್ಚ್‌ನಲ್ಲಿನ ಘಂಟೆಯ ಗಂಭೀರ ತೊದಲು ಧ್ವನಿ ಕೇಳಿಸಬಹುದು. ಯಾರೊಬ್ಬರು ಯಾರಿಗಾದರೂ ಕೇಳಬಹುದು : "ಈ ಆಕಸ್ಮಿಕ ಘಂಟಾನಾದ ಯಾತಕ್ಕಾಗಿ? ಯಾರು ಹೋದರು?" "ಪಾಪ, ಹೋದ" ಈ ಎಂದಿನಂತೆ ಕೇಳಿ ಬರುವ ಪ್ರತಿಕ್ರಿಯೆ ಗಾಳಿಯಲ್ಲಿ ಕಳೆದು ಹೋಗಬಹುದು. ಚರ್ಚಿನ ಶಿಖರದ ಮೇಲಿನ ಘಂಟೆ ಉಚ್ಚಸ್ವರದಿಂದ ಹೇಳತೊಡಗಬಹುದು:

"No man is an island, entire of himself. Every man is a piece of the Continent, a part of the main; Any man's death diminishes me, because I am involved in mankind; And therefore never send to know for whom the bell tolls; It tolls for thee."

ಪ್ರತಿಯೊಂದು ಮೃತ್ಯುಘಂಟೆ ನಮಗೆ ನಮ್ಮ ಮೃತ್ಯುವಿನ ಬಗ್ಗೆ ಗೂಢ ರೀತಿಯಲ್ಲಿ ಪೂರ್ವಸೂಚನೆ ನೀಡುತ್ತಿರುತ್ತದೆ. ಆದರೆ, ಜೀವನದ ದೈನಂದಿನ ಕೋಲಾಹಲದಲ್ಲಿ ಆ ಘಂಟೆಯ ಅರ್ಥ-ಸ್ವರ ನಮ್ಮ ಮನಸ್ಸಿಗೆ ತಟ್ಟುವುದೆ ಇಲ್ಲ. 

---

ಡಾ. ಪಿ. ಆರ್. ಯಾರ್ದಿ, 'ಜ್ಞಾನದೀಪ', ೨ನೇ ಕ್ರಾಸ್, ಯುಬಿ ಹಿಲ್, ಧಾರವಾಡ-೫೮೦ ೦೦೧
ದೂರವಾಣಿ : ೦೮೩೬-೨೯೪೬೮೪

# ಕೈಫಿ ಆಜ್ಮಿಯವರ ನಾಲ್ಕು ಪದ್ಯಗಳು

ಅನು : ವಿಭಾ ತಿರಕಪಡಿ

## ಕೊನೆಯ ರಾತ್ರಿ

ಚಂದ್ರ ಚೂರಾದ, ನಕ್ಷತ್ರಗಳು ಕರಗಿದವು
ಹನಿ-ಹನಿಯಾಗಿ ತೊಟ್ಟಿಕ್ಕುತ್ತಿದೆ ರಾತ್ರಿ.
ಕಣಿವೆಗಳು ಬಾಗುತ್ತಿವೆ ಕಂಗಳ ಚುಂಬಿಸಲು
ಇರುಳು ಕಣ್ಣೊಳಗೆ ಜಾರುತ್ತಿದೆ.
ಈ ರಾತ್ರಿ ನನಗೆ ಯಾವ ಕತೆಯೂ ಬೇಡ
ಈ ರಾತ್ರಿ ನನ್ನನ್ನು ಮಲಗಲು ಬಿಡಿ.

ಬಿಗಿಯಾದ ಜಾಲಗಳು ಸಡಿಲಗೊಳ್ಳುತ್ತಿವೆ
ನೆತ್ತರಿನೊಳಗೆ ಮೋಡಗಳು ಒಂದಾಗುತ್ತಿವೆ.
ಅಡವಿಗಳು ಇತ್ತ ಕಡೆ ಬರುತ್ತಿವೆ.
ತಮ್ಮ ಗುಲಾಬಿ ರೆಕ್ಕೆಗಳ ಹರವುತ್ತ
ಬೆಂಕಿಯ ಅಧಿಕಗೊಳಿಸಿ, ಮಧು ಬಟ್ಟಲುಗಳನ್ನಿಡಿ
ಈ ರಾತ್ರಿ ನನ್ನನ್ನು ಮಲಗಲು ಬಿಡಿ.

ಸಂಜೆ ಜಾರುವ ಮುನ್ನ ಈ ನಗರ ಸತ್ತು ಹೋಗಿತ್ತು.
ಯಾರು? ಬಾಗಿಲ ತಟ್ಟುವವರಾರು?
ಈ ಗೋಡೆಗಳ ಇನ್ನೂ ಎತ್ತರಗೊಳಿಸಿ
ಒಳಗೂ ತೂರಿ ಬರುತ್ತಿದೆ ಬೀದಿಯ ಸದ್ದು
ಈ ರಾತ್ರಿ ಎಲ್ಲ ಮದಿರಾಲಯಗಳು ಮುಚ್ಚಿವೆಯೆಂದು
ಘೋಷಿಸಿ, ನನ್ನನ್ನು ಮಲಗಲು ಬಿಡಿ

ಇಲ್ಲಿವೆ ಬರೀ ಮನುಷ್ಯದೇಹಗಳು ಮತ್ತು ಹೆಣದಬಟ್ಟೆಗಳು
ಮಾತು ಕೇಳುವುದಿಲ್ಲ, ತಲೆ ಅಲ್ಲಾಡಿಸುವುದೂ ಇಲ್ಲ
ಶಾಂತಿ ಉಳಿಯಲಿ
ಸತ್ತವರು ಗೋರಿಗಳಿಂದೆದ್ದು ಬರುತ್ತಾರೆ.
ಯಾರೂ ಗೆಳೆಯರಲ್ಲ ಹಾಗಂತ ಪರಿಚಿತರೂ ಅಲ್ಲ.
ದಯವಿಟ್ಟು ಈ ರಾತ್ರಿ ನನ್ನನ್ನು ಮಲಗಲು ಬಿಡಿ
ಯಾರೋ ಆತ ಹೇಳುತ್ತಿದ್ದ, ಸತ್ಯವನ್ನೇ ಹೇಳುತ್ತಿದ್ದ
ಎಲ್ಲರಿಗೂ ವಿದ್ರೋಹ ರೂಢಿಯಾಗಿದೆ.
ಯಾರಿಗೆ ಕೊಲೆಯ ಬಗ್ಗೆ ತಕರಾರಿಲ್ಲವೋ
ಅವರು ಹೂಳುವುದನ್ನೇಕೆ ವಿರೋಧಿಸುತ್ತಾರೆ?
ಇಂದು ಸುಮ್ಮನೇ ಮಲಗಿಬಿಡುವುದೇ ಜಾಣತನ
ಹಾಗೆಂದೇ ಈ ರಾತ್ರಿ ನನ್ನನ್ನು ನಿಶ್ಚಿಂತ ಮಲಗಲು ಬಿಡಿ.

## ಹವ್ಯಾಸ

ಯುಗಗಳಿಂದ ಇದೇ ಕತ್ತಲಬಾವಿಯೊಳಗೆ ಬಂಧಿಯಾಗಿದ್ದೇನೆ
ನನ್ನಷ್ಟಕ್ಕೆ ತಲೆಹೊಡೆದುಕೊಳ್ಳುತ್ತ; ವಟಗುಟ್ಟುತ್ತಿರುತ್ತೇನೆ.
ನನಗೆ ಬೆಳಕು ಬೇಕು, ಬೆಳದಿಂಗಳು ಬೇಕು, ಬದುಕು ಬೇಕು
ಪ್ರೀತಿಯ ಬೆಳಕು, ಸ್ನೇಹದ ಬೆಳದಿಂಗಳು, ಸಾವಿನ ಸ್ವಾತಂತ್ರ್ಯ ಬೇಕು

ಹಗಲಿರುಳು ನನ್ನದೇ ದನಿ ಕೇಳುತ್ತ
ಕ್ರಮೇಣ ಹೃದಯಕ್ಕೆ ನಂಬಿಕೆ ಬಂತು
ಭಣಗುಟ್ಟುವ ಜಗದಲ್ಲಿ
ಅಪ್ರಾಮಾಣಿಕ ಗೆಳೆಯರ ನಡುವೆ

ಸಾವಿನ ಸೆರಗಲ್ಲಿ
ಬೆಳಕಿಲ್ಲ
ಬೆಳದಿಂಗಳಿಲ್ಲ
ಬದುಕೂ ಇಲ್ಲ

ಬದುಕು ಉದ್ದನೆಯ ರಾತ್ರಿ
ಸೃಷ್ಟಿಯೊಂದು ಭ್ರಮೆ
ಮನುಷ್ಯ ಕ್ಷಣ ಭಂಗುರ
ಕ್ಷುದ್ರ ಜನತೆ

ನಗರ ಅಸೂಯೆಯ ತವರು
ಹಳ್ಳಿಗಳು ಅದಕ್ಕೂ ಕಡೆ

ಈ ಕತ್ತಲೆ ನನ್ನ ಇಡಿಯಾಗಿ ಹೊಸಕಿದಾಗ
ಅಚಾನಕ್ ಈ ಬಾವಿ ನನ್ನ ಹೊರನೂಕಿತು.
ತನ್ನ ಎದೆಯಾಳದಿಂದ ನನ್ನ ತೂರವಚ್ಚಿತು.
ನೂರಾರು ಈಜಿಪ್ತಿಯನ್ನರು ಎದುರಿಗೆ
ನೂರು ಬಾಜಾರುಗಳಲ್ಲಿ
ಒಬ್ಬ ವೃದ್ಧ ಜುಲೇಖಾಳೂ ಅಲ್ಲಿಲ್ಲ

ಎಷ್ಟೊಂದು ಜನ ಗ್ರಾಹಕರಿದ್ದರು ಯಾರಿಗೆ ಗೊತ್ತು?
ಯೂಸುಫನ ಬೆಲೆ ಹೆಚ್ಚುತ್ತಲೇ ಇರುತ್ತಿತ್ತು.
ಜನ ಮಾರಿಕೊಳ್ಳಲು ಸಿದ್ಧರಿದ್ದರು.
ಚಂದ್ರಮುಖಿಯರ ಮುಖಗಳಿಂದ ಸೆರಗು ಸರಿದವು

ರೇಶಿಮೆಯ ಪರದೆಗಳು ತೆರೆದವು
ಕಣ್ಣುಗಳ ನೋಟ ಕೆಳಗಿಳಿಯಲಿಲ್ಲ
ಸಂಗಮರಿಯಂಥ ಬೆರಳುಗಳು ಕತ್ತರಿಸಿದವು
ಯಾವುದೋ ಕೈ ಸೆರಗಿನವರೆಗೆ ಬಂತು,

ದೇಹಗಳು ದೂರ ಚದುರಿದವು
ನಾ, ಹೆದರಿ ಮತ್ತದೇ ಬಾವಿಯೊಳಗೆ ಜಿಗಿದೆ
ಮತ್ತದೇ ಪೀಡೆಯಿಂದ ತಲೆ ಚಚ್ಚಿಕೊಳ್ಳತೊಡಗಿದೆ
ಮತ್ತದೇ ನೋವಿನಿಂದ ಬೇಡತೊಡಗಿದೆ.

ನನಗೆ ಬೆಳಕು ಬೇಕು, ಬೆಳದಿಂಗಳು, ಬೇಕು
ಬದುಕು ಬೇಕು.

## ಎರಡು – ರಾತ್ರಿಗಳು

ಕೇಳದಿರು ಆ ಹಸಿ-ಬಿಸಿ ಭಾವಗಳ ಕುರಿತು
ಕೇಳದಿರು ಆ ಒತ್ತಿ ಹಿಡಿದ ಕರುಣೆಯ ಕುರಿತು
ಮತ್ತೆ-ಮತ್ತೆ ಕೃಪೆದೋರುವ ಆಕೆ
ಕಪ್ಪು ಮುಚ್ಚಿ ನನ್ನ ಹಾಸಿಗೆಯ ಬಳಿ ಬರುವಾಕೆ
ಏನೇನೋ ತಿಳಿಸಿ ಹೇಳುವ ಹುಡುಗಿ
ತನ್ನಷ್ಟಕ್ಕೆ ನಾಚಿಕೊಳ್ಳುವ ಬೆಡಗಿ
ಕೇಳದಿರು. ಎಷ್ಟು ಕಿರಿದಾಗಿತ್ತು ಆ ರಾತ್ರಿ.

ಈ ನಿಟ್ಟುಸಿರಿಗೊಂದು ಕೊನೆಯಿದೆಯೊ ಇಲ್ಲವೊ
ಈ ರಾತ್ರಿ ಕಳೆಯುವುದೊ ಇಲ್ಲವೋ ನೋಡಿ.
ಮೋಡಗಳು ಚದುರಿ ಚಲ್ಲಾಪಿಲ್ಲಿಯಾದಂತೆ

ಕರಗಲಾಗದೆ, ಭಯಗೊಂಡ ಮನಸ್ಥಿತಿ
ಕೆನ್ನೆಯ ಮೇಲಿಳಿದಿವೆ ಕಣ್ಣೀರ ಹನಿಗಳು
ರೆಪ್ಪೆಯೊಳಗಡೆ ಬಂಧಿಯಾಗಿವೆ ಒಂದಿಷ್ಟು

ಈ ರಾತ್ರಿಗೊಂದು ನಸುಕಿದೆಯೋ ಇಲ್ಲವೊ
ಆ ದೇವರೇ ಬಲ್ಲ!

## ಚಕ್ರ

ಪ್ರತಿದಿನವೂ ಎಲ್ಲಿಂದ ಮುಂದುವರಿಯುತ್ತೇನೋ
ಮರಳಿ ಅಲ್ಲಿಗೇ ಬರುತ್ತೇವೆ.
ಎಷ್ಟೋ ಸಲ ನಾನೇ ಒಡೆದು ಹಾಕಿದ ಗೋಡೆಗಳಿಗೆ
ಮತ್ತೆ ಮತ್ತೆ ಹಾಯುತ್ತೇನೆ

ಹೊಸ ನಗರಗಳು ಹುಟ್ಟುತ್ತವೆ;
ದಿನವೂ ಈ ಭೂಮಿಯಲ್ಲಿ ಒಂದಾಗುತ್ತವೆ.
ಬಿಸಿಯಿತ್ತು ಮೊದಲು ಭೂಕಂಪನಗಳಲ್ಲಿ
ಈಗ ಅವು ಕೂಡ ನಿತ್ಯದ  ಮಾತಾಗಿದೆ.

ಈ ದೇಹದಿಂದ ಆತ್ಮದವರೆಗೆ ಎಲ್ಲ ಒಣ ಮರುಭೂಮಿ
ಬೆಳಕಿಲ್ಲ, ನೆರಳಿಲ್ಲ, ಮರೀಚಿಕೆಯೂ ಇಲ್ಲ
ಯಾವ ಮರುಭೂಮಿಯಲ್ಲಿ ಎಷ್ಟು ಬಯಕೆಗಳಿವೆ
ಯಾರಿಡುತ್ತಾರೆ ಹೇಳಿ ಸಮಾಧಿಗಳ ಲೆಕ್ಕ?

ನಾಡಿ ಸ್ತಬ್ಧವಾಗುತ್ತಲೇ ಮತ್ತೆ ಮಿಡಿಯುತ್ತದೆ
ಈ ಹೃದಯಕ್ಕೆ ಹೆದರಿಕೆಯೂ ಸಹಜ
ರಾತ್ರಿ, ಕತ್ತಲೆಗೆ ಕತ್ತಲೆಯೇ ಹೇಳುತ್ತದೆ.
ಬದುಕುವುದು ಕೂಡ ಒಂದು ಹವ್ಯಾಸ

ಇಂದ್ರ ಧನುಸ್ಸು ಕೂಡ ಒಂದೇ ಬಣ್ಣದ ಗುಚ್ಛ
ಗಾಜಿನ ಬಟ್ಟಲಿಗೂ ಅದರದೇ ಪರಿಧಿ
ಮೂಲೆ-ಮೂಲೆಗೂ ತಲೆ ಎತ್ತಿವೆ ಮಸೀದೆಗಳು
ಇನ್ನು ಸುರೆಮನೆಗಳಾಕಾರ ಹೇಗಿರಬೇಡ?

ಯಾರೋ ಹೇಳುತ್ತಿದ್ದರು. ನಾನೊಂದು ಕಡಲು
ಆದರೆ ನನ್ನಲ್ಲಿ ಒಂದು ಹನಿಯೂ ಇಲ್ಲ
ನಾನು ಕುಶಲವೆಂದೇ ಬರೆಯುತ್ತೇನೆ
ಈಗಂತೂ ದೈವದಲ್ಲಿ ಅಪಾಯವೂ ಇಲ್ಲ!

ನನ್ನ ಅಂಗೈ ರೇಖೆಗಳ ಓದುತ್ತೇನೆ
ಒಮ್ಮೆ ಗೀತೆ ಮತ್ತೊಮ್ಮೆ ಖುರಾನ್‌ನ ಹಾಗೆ
ಕೆಲವು ರೇಖೆಗಳ ಮಿತಿಯಲ್ಲಿ
ಬದುಕು ಬಂಧಿಯಾಗಿದೆ, ಸೀತೆಯ ಹಾಗೆ
ಶ್ರೀರಾಮನೆಂದು ಬರುವನೋ ಗೊತ್ತಿಲ್ಲ
ಸದ್ಯ, ರಾವಣನಾದರೂ ಬಂದಿದ್ದರೆ ಸಾಕಿತ್ತು.

---

ವಿಭಾ ತಿರಕಪಡಿ, ಅಂಚೆ : ಮಹಾಲಿಂಗಪುರ - ೫೮೭೩೧೨, ಬಾಗಲಕೋಟೆ ಜಿಲ್ಲೆ

# ಸಿ. ನಾಗಣ್ಣ ಅನುವಾದಿಸಿದ ಕಪ್ಪು ಕಾವ್ಯ

*ದಲಿತ ಬಂಡಾಯದ ಕಾಲವೇ 'ಕಪ್ಪು' ಕಾವ್ಯಕ್ಕೆ ಒಪ್ಪುವಂಥ ಕಾಲವಾಗಿತ್ತು; ಕನ್ನಡ ಕಾವ್ಯದ ಈಗಿನ ನಿರೀಕ್ಷೆಗಳೆ ಬೇರೆ ಎಂಬ ಒಂದು ತಿಳಿವಳಿಕೆಯಿದೆ. ಇದು ಪೂರ್ತಿ ನಿಜವಲ್ಲ. ಕಾವ್ಯದಲ್ಲಿ ಪ್ರತಿಭಟನೆ ಬೇರೆ ಬೇರೆ ಸ್ತರದಲ್ಲಿ ನಡೆಯುತ್ತಿರುತ್ತದೆ. ಒಮ್ಮೆ ತಾರಕದಲ್ಲಿ, ಒಮ್ಮೆ ಮಂದ್ರದಲ್ಲಿ, ಮತ್ತೊಮ್ಮೆ ಕ್ಷೀಣವಾಗಿ ಸಾಗುತ್ತಲೇ ಇರುತ್ತದೆ. ಸದ್ಯದ ಪ್ರತಿಭಟನೆಯ ಧಾಟಿ ಮಂದ್ರದ್ದು ಎನ್ನಬಹುದು. ವ್ಯಂಗ್ಯದ ಮೊನಚನ್ನು ಆವಾಹಿಸಿಕೊಳ್ಳಲು ಕಾವ್ಯ ಹವಣಿಸುವ ಹೊತ್ತಿನಲ್ಲಿ ಉಚ್ಚ ಸ್ವರದ ಮಾದರಿ ಉಚಿತವಾಗದು. ಹಾಗಾಗಿ ಇಂದಿಗೂ ಒಪ್ಪಿತವಾಗಬಲ್ಲ ಮಂದ್ರಸ್ವರದ ಕಪ್ಪು ಕಾವ್ಯದ ಅನುವಾದವನ್ನು ಅನಿಕೇತನದ ಓದುಗರಿಗಾಗಿ ನೀಡುತ್ತಿದ್ದೇವೆ.*

# ಗಣಿಯಿಂದ ಬಂದವ

**ಮೂಲ : ಜೋಸ್ ಕ್ರೆವೇರಿನ್ಹಾ**

ತಲೆ ಎಣಿಸಿ ದನವ ಗುರುತಿಸುತ್ತಾರೆ
ಹಿಡಿದು ಗುರುತು ಮಾಡುತ್ತಾರೆ
ದಬ್ಬುತ್ತಾರೆ ರೈಲು ಗಾಡಿಯ ಒಳಗೆ
ಕೊಟ್ಟಿಗೆಯಲ್ಲುಳಿಯುವುವು ಹಸುಗಳು
ಈಯಲಿಕ್ಕೆ
ಇಂಥವೇ ದನಗಳನ್ನು

ರೈಲುಗಾಡಿಯು ಬಂತು ಮರಳಿ ಗಣಿಯಿಂದ
ಆಫ್ರಿಕಾದ ಮುದಿ ದನಗಳವು
ಮುಗ್ಗಿವೆ
ತರತರದ ರೋಗಗಳಿಂದ

ತಲೆಗಳ ಕೊಟ್ಟೇಬಿಟ್ಟಿವೆ
ಗಣಿಗಳಿಂದ ಬಂದ ದನಗಳು

ಬಂದು ನೋಡಿರಿ ನೀವಾದರೂ
ತಲೆಯೇ ಇಲ್ಲ
ಮಾರಿದ ದನಗಳಿಗೆ
ನನ್ನ ನೆಲದ ಓ ದೇವರೆ
ಮಾರಿದ ಈ ದನಗಳಿಗೆ ತಲೆಯೇ ಇಲ್ಲ

ಮತ್ತೆ ನಿಂತಿದೆ ರೈಲು ಗುಟುರುತ್ತ
ಸಿದ್ಧವಾಗಿ
ದನಗಳನ್ನಾಯ್ದು ಗುರುತು ಮಾಡಿ
ಹೊತ್ತೊಯ್ಯಲು
ಮೂರ್ಖ ದನಗಳು
ನನ್ನ ದನಗಳು
ಆಫ್ರಿಕಾದ ದನಗಳು
ಗುರುತು ಮಾಡಿ ಮಾರಲ್ಪಟ್ಟವು.

## ಆಳುವವರು

ಮೂಲ : ಮಬೆಲ್ಲಾ ಸೋನ್ ಡಿಪೊಕೊ

ಮಳೆ ಹಿಡಿದ ರಾತ್ರಿ ಇದು
ಬಡನೆಲದ ಭೂಪಟವನ್ನು ಬೆಳಕಿಗೊಡ್ಡಿ
ಆಳುವವರು
ಬಡಬಡಿಸುತ್ತಾರೆ ಕುಡಿದು ಕಂಠಪೂರ್ತಿ
ಕ್ರುದ್ಧ ಕಡಲಿನ ನಡು ಮಧ್ಯ ತೂಗುಯ್ಯಾಲೆಯಲ್ಲಿ
ತೊನೆಯುವ ರೀತಿ ಅವರಿರುವ ಅರಮನೆ.

ಬೀಳುವ ಗಾಳಿ ಮಳೆಗೆ ಮೊದಲು ತುಂಬುವ
ಧೂಳಲ್ಲಿ ಮರೆಯಾದ ಬೀದಿ ದೀಪಗಳ ಸುತ್ತ ವರ್ತಿಸುವ
ಕೀಟಗಳಂತೆ ಅವರು.

ಇದು ಬಿರುಗಾಳಿಯ ರಾತ್ರಿ
ಬೆಟ್ಟಗಳು ಕಾಣೆಯಾಗುತ್ತವೆ ಕಣಿವೆಗಳಲ್ಲಿ

ನದಿಗಳು ಹರಿಯುತ್ತವೆ ಹಿಂಪರಕನಾಗಿ
ಭೋರ್ಗರೆವ ಕಡಲು ಎರಚಿದ
ಉಪ್ಪುನೀರು ಇಳಿಯುತ್ತದೆ.
ನಮ್ಮ ಮುಖ ಮೈಗಳಿಂದ

ಶಿಶಿರದಲ್ಲಿ ಒಡೆಯುವ ತುಟಿಗಳ ಹಾಗೆ
ನಮ್ಮ ಭರವಸೆ ಬಿರಿಯುವ ಕಾಲಕ್ಕೆ
ತುಟಿ ಬಿಚ್ಚದ ಕಡಲ ಹಕ್ಕಿಯ ಕೇಳಬೇಕು
ಅದು ಸತ್ತು

ಅದರ ಸುತ್ತ ಕಾಗೆಗಳು
ಶೋಕವಾಚರಿಸುವ ಮುನ್ನ

ಕ್ರೂರ ರಾಜ್ಯದ ಹಣೆ ಬರಹವೇ ಹೀಗೆ
ಬಣ್ಣ ಬಣ್ಣದ ಪುಕ್ಕ ಹೊತ್ತ
ಗಿಣಿಗಳಾಳುವ ನಾಡು

# ಹಸಿವಿನ ಮುಖ

ಮೂಲ : ಓಸ್ವಾಲ್ಡ್ ಮಬೂಸೇನಿ ಮಟ್ಶಾಲಿ

ಅವನ ಎದೆ ಬಗ್ಗರಿ ಮೂಳೆ ಎಣಿಸಿದೆ
ಬರಗಾಲವೆಂಬ ಶಿಲ್ಪಿ ಕಡೆದು ನಿಲ್ಲಿಸಿದಂತೆ ಕಂಡವು

ಪಿಳಿ ಪಿಳಿ ನೋಡಿದ ಗಾಜಿನಂಥ ಕಣ್ಣುಗಳಿಂದ
ಮುಗಿಲೆತ್ತರದ ಸೆಜ್ಜೆ ಮೇಲಿಟ್ಟ
ರೊಟ್ಟಿ ತುಣುಕೊಂದ
ಎಟುಕಿಸಿಕೊಳ್ಳುವವನ ಹಾಗೆ

ಬಣ್ಣವಳಿದ ಅವನ ಚರ್ಮವಿದೆಯಲ್ಲ
ಡಾಕ್ಟರ್ ತೊಟ್ಟ ಕೈಗೌಸಿನ ತರಹ
ನಾಲಗೆ ಸೆಳೆದುಕೊಳ್ಳುತ್ತಾನೆ ಒಳಕ್ಕೆ
ಚಾಚುತ್ತಾನೆ ಹೊರಕ್ಕೆ
ಸುಳಿಯುವ ಕೀಟಗಳನ್ನು ಬಾಚಿಕೊಳ್ಳುವ
ಓತಿಕ್ಯಾತನ ರೀತಿ.

ಓ! ಮಗು,

ನಿನ್ನ ಹೊಟ್ಟೆಯೊಂದು ಸಿಂಹಗಳ ಗುಹೆ
ಗರ್ಜಿಸುತ್ತಿದೆ
ಹಗಲೂ
ಇರುಳೂ.

## ಉಯ್ಯಾಲೆಯಲ್ಲಿ ಕುಳಿತ ಹುಡುಗ

ನಿಧಾನವಾಗಿ ತೂಗುತ್ತಾನೆ
ಇತ್ತಿಂದತ್ತ ಅತ್ತಿಂದಿತ್ತ
ಆಮೇಲೆ ಜೋರಾಗಿ
ಮೇಲಿಂದ ಕೆಳಗೆ
ಕೆಳಗಿನಿಂದ ಮೇಲೆ

ನುಸುಳಿದ ಗಾಳಿ
ಉಬ್ಬಿಸುತ್ತದೆ ಅವನ ನಿಲುವಂಗಿಯನ್ನು
ಹರಿದ ಪಟದ ಹಾಗೆ

ಸುತ್ತುತ್ತಿದೆ ಜಗತ್ತು:
ಪೂರ್ವ ಪಶ್ಚಿಮವಾಗಿ
ದಕ್ಷಿಣೋತ್ತರವಾಗಿ
ಈ ಎಲ್ಲ ನಾಲ್ಕು ದಿಕ್ಕುಗಳೂ
ಅವನ ತಲೆಯಲ್ಲಿ ಒಂದಾಗುತ್ತದೆ

ಅವ್ವ!
ನಾನು ಬಂದದ್ದೆಲ್ಲಿಂದ
ನಾನು ಉದ್ದ ಶರಾಯಿ
ತೊಡುವುದು ಯಾವಾಗ
ಅಪ್ಪನ್ನ ಜೈಲಿಗಟ್ಟಿದರು ಯಾಕೆ?

# ತರುಣರನ್ನು ಕಾಣುವಾಗ

ಮೂಲ : ಮಾಜಿಸಿ ಕುನೇನೆ

ಪೂರ್ವಕಾಲದ ಶೂರರನ್ನು ಅನುಕರಿಸಿ
ಬೆಳೆಯುವ ಕೇಸರದ
ಸಿಂಹದ ಮರಿಗಳೆಂದರೆ

ನನಗೆ ಇಷ್ಟ
ಎಂಥ ಭವಿಷ್ಯವಿದೆ ಈ ಮರಿಗಳಿಗೆ!

ಹಿಡಿಯುವವರಿಗೆ ಸಿಕ್ಕದೆ ಹಾರುವವೆಂದು
ಸೊಕ್ಕುವ
ಎಳೆಯ ಜಿಂಕೆಗಳ
ಕೋಮಲ ಕತ್ತುಗಳ ಮೇಲೆ
ಕುಳಿತು ಹೀರುವ ನೆತ್ತರಿಗೆ
ಬಾಯಾರಿವೆ ಇವು.
ಮೆಚ್ಚಿದ್ದೇನೆ
ಇವುಗಳ ಸಾಮರ್ಥ್ಯವನ್ನು
ಇನ್ನೇನು ಸಿಗಿಯುತ್ತವೆ ಇವು
ಇಷ್ಟರಲ್ಲೇ
ಎಮ್ಮೆಗಳನ್ನು

## ಪಾಶ್ಚಾತ್ಯ ನಾಗರಿಕತೆ

**ಮೂಲ : ಅಗಸ್ಟಿನೊ ನೇಟೊ**

ನೆಟ್ಟ ಕಂಬಗಳಿಗೆ
ತಗಡು ಬಡಿದುಬಿಟ್ಟರೆ
ಸಿದ್ಧವಾಯಿತು ಮನೆ

ಹರಡಿದ ಹರಕು ಚಿಂದಿಗಳೆರಡು
ಒಪ್ಪವಾಗಿಸುತ್ತವೆ ನಕಾಶೆ.

ಬಿರುಕುಗಳ ಮಧ್ಯೆ
ಇಣುಕುವ ಕಿರಣಗಳು
ಹನ್ನೆರಡು ತಾಸಿನ ದುಡಿಮೆಗೆ ಬಾಗಿ ಬರುವ
ಯಜಮಾನನನ್ನ ಸ್ವಾಗತಿಸುತ್ತವೆ

ಬಂಡೆ ಸೀಳಿ
ಕಲ್ಲು ಹೊತ್ತು
ಬಂಡೆ ಸೀಳಿ
ಕಲ್ಲು ಹೊತ್ತು

ಚಳಿ ಇರಲಿ
ಬಿಸಿಲಿರಲಿ
ಬಂಡೆ ಸೀಳಿ
ಕಲ್ಲು ಹೊತ್ತು
ಮುಪ್ಪಡರುತ್ತದೆ ಬೇಗ

ಹಸಿವಿನಪ್ಪುಗೆಗೆ ಸತ್ತ
ಅವನ ಜಾಲಿಸುವುದಕ್ಕೆ
ಕಪ್ಪು ಇರುಳಿನ ನೆಲಕೆ
ಹರಕು ಚಾಪೆಯೆ ಸಾಕು

ಸಿ. ನಾಗಣ್ಣ, ೩೧೯೫, ಮುಖ್ಯರಸ್ತೆ, ವಿಜಯನಗರ ೨ನೇ ಹಂತ, ಮೈಸೂರು - ೫೭೦ ೦೧೭

## ಭಿಖರಿ ಥಾಕೂರ್

ಭಿಖರಿ ಥಾಕೂರರು (೧೮.೧೨.೧೮೮೭ ೧೦.೭.೧೯೭೧) ಭೋಜಪುರಿ ಸಂಸ್ಕೃತಿಯ ಮಹಾನ್ ಗಾಯಕರಾಗಿದ್ದರು. ಅವರು ಕವಿಯಷ್ಟೇ ಅಲ್ಲದೆ ಭಕ್ತರೂ ನಟರೂ ನಾಟಕಕಾರರೂ ಸಮಾಜ ಸುಧಾರಕರೂ ಆಗಿದ್ದರು. ಅವರು ಸಮಕಾಲೀನ ಸಮಾಜದ ನಾಡಿಮಿಡಿತವನ್ನು ಅರಿತುಕೊಂಡಿದ್ದ ದಾರ್ಶನಿಕರು. ಹಿಂದಿ ಭಾಷೆಯಲ್ಲಿ ವಾಸ್ತವವಾದಿ ನಾಟಕಗಳು ರಚನೆಗೊಳ್ಳುವ ಮೊದಲೇ ಭಿಖರಿಠಾಕೂರರು ಉತ್ತಮ ಮಟ್ಟದ ವಾಸ್ತವವಾದಿ ನಾಟಕಗಳನ್ನು ಭೋಜಪುರಿಯಲ್ಲಿ ರಚನೆ ಮಾಡಿದಂಥವರು. ತಮ್ಮ ನಾಟಕಗಳ ಮೂಲಕ ತಮ್ಮ ಭಾಷೆಯ ಪರಿಸರದಲ್ಲಿ ತುಂಬಾ ದಟ್ಟವಾದ ಪ್ರಭಾವ ಬೀರಿದ್ದರು. ಇದು 'ಬಿದೆಸಿಯಾ' ಎಂಬ ಹೊಸಬಗೆಯ ರಂಗಭೂಮಿ ತಲೆ ಎತ್ತಲು ಕಾರಣವಾಗಿತ್ತು. ಜನ್ಮದಾತರ ಬಗೆಗಿನ ವಿವಾದವನ್ನು ವಸ್ತುವಾಗುಳ್ಳ ಪ್ರಸ್ತುತ 'ಗಾಬರ್ ಗಿಚೊರ್' ನಾಟಕವು ಮೂಲ ಚೀನೀ ಭಾಷೆಯಲ್ಲಿದ್ದ ಕತೆಯ ರೂಪಾಂತರವೆಂದು ಹೇಳಲಾಗುವ ಬ್ರೆಕ್ಟ್‌ನ 'ಕಕೇಷಿಯನ್ ಚಾಕ್ ಸರ್ಕಲ್' ನಾಟಕವನ್ನು ನೆನಪಿಗೆ ತರುವಷ್ಟು ಸರಳ ಶೈಲಿಯಲ್ಲಿದೆ. ಅಲ್ಲದೆ ಭರತೇಂದು ಹರಿಶ್ಚಂದ್ರರ 'ಅಂಧೇರಿ ನಗರಿ ಚೌಪತ್ ರಾಜ್' ಮತ್ತು ದ.ರಾ. ಬೇಂದ್ರೆ ಅವರ 'ಸಾಯೋ ಆಟ' ನಾಟಕಗಳೊಂದಿಗೆ ಸಾಮ್ಯತೆ ಪಡೆದಿದೆ ಎಂದು ಹೇಳಲಾಗಿದೆ.

## ಗಾಬರ್ ಗಿಚೊರ್ (ಭಿಖರಿ ಥಾಕೂರರ ಭೋಜಪುರಿ ಏಕಾಂಕ)

**ಅನು : ಶ್ರೀಧರರಾವ್ ಪಿಸ್ಸೆ**

**ಪಾತ್ರಗಳು**

(**ಗಾಲಿಜ್**-ಕೆಲಸದ ಮೇಲೆ ದೂರದ ನಾಡಿಗೆ ಹೋಗಿರುವ ಹಳ್ಳಿಯ ಒಬ್ಬ ಯುವಕ.

**ಗಾದ್‌ಭಾದಿ**-ಹಳ್ಳಿಯ ಅಲೆಮಾರಿ.

**ಗಿಚೋರ್**-ಗಾಲಿಜ್‌ನ ಹೆಂಡತಿಯಲ್ಲಿ ಗಾದ್‌ಬಾದಿಯಿಂದ ಹುಟ್ಟಿದವನು.

**ಪಂಚ**-ಹಳ್ಳಿಯ ಗೌರವಾನ್ವಿತ ವ್ಯಕ್ತಿ

**ಗಾಲಿಜ್‌ನ ಹೆಂಡತಿ**-ಗಾಲಿಜ್‌ಗೆ ಹೆಂಡತಿ, ಗಿಚೊರ್‌ಗೆ ತಾಯಿ.

ಇವರೊಂದಿಗೆ ಕಟುಕ, ಮೇಳ, ಪ್ರೇಕ್ಷಕರು ಇತ್ಯಾದಿ.)

**ಮೇಳ** : ಗಣಪತಿಯ ಪಾದಕ್ಕೆ ತಲೆಬಾಗಿ ನಮಿಸುವೆ
ಗಾಬರ್ ಗಿಚೊರ್‌ನ ಕತೆಯೊಂದು ಹೇಳುವೆ
ದೂರದ ನಾಡಿಂದ ಗಾಲಿಜ್ ತಿರುಗಿ ಬಂದಾ
ಮನಸೋ ಇಚ್ಛೆಯಂತೆ ಹಣಗಳಿಸಿ ತಂದಾ
ತನ್ನ ಹೆಂಡತಿಯನ್ನು ಬಲುಕಾಲ ಬಯಸದೆ
ತೂರಾಡುತ ಇರುತಾನೆ ಮದಿಸಿದ ಗಜದಂತೆ
ಅವನನ್ನೆ ದಿಟ್ಟಿಸುತ ಅವನನ್ನೆ ನಿರುಕಿಸುತ
ಜನಜಾತ್ರೆ ನೆರೆದಿದೆ ಅವನಾ ಮನೆ ಮುಂದೆ
ಅವನು ಹಿಂದಿರುಗಿರುವುದು ಅವನ ಹೆಂಡತಿ ಕೇಳಿ
ಜಿಗಿದು ಕುಣಿದಿತು ಅವಳಾ ಮನಸು ಹಾರಿ
ಮೊಪ್ಪ ತಣಿಗೆಯಲ್ಲಿ ಅವನಾ ಪಾದ ತೊಳೆದು
ಬಗೆದಳು ತಾನಂದು ಅದೃಷ್ಟವಂತೆಯೆಂದು

**ಗಾಲಿಜ್‌ನ ಹೆಂಡತಿ-(ಗಾಲಿಜ್‌ನಿಗೆ)**
ಸೂರ್ಯನ ಬಿಸಿಲಿಗೆ ತೆರಕೊಳ್ಳೊ ಕಮಲದಂಗೆ
ಚಂದ್ರನ ತಂಪಿಗೆ ಅರಳೋ ನೈದಿಲೆಯಂಗೆ
ಹೊಸ ಚಿಗುರು ವಾಳಿಗೆ ಮೈ ಮರೆಯೊ ದುಂಬಿಯಂಗೆ
ಮಾನಸ ಸರೋವರದಾನಂದದ ಹಂಸದಂಗೆ
ಮೂಲಾಧಾರ ಜೀವ ಚುರುಕು ಬಯಕೇಲಿ
ಸಹಜ, ಸಂತೋಷ ಎಲ್ಲರಿಗಿಂಥಾ ಹಾದೀಲಿ
ನಿನ್ನಾ ನಸು ನೋಟವೆ ನನ್ನ ನಗೆಗೆ ಮೂಲಸೆಲೆ

**ಗಾಲಿಜ್** : ಇದಕ್ಕೆಲ್ಲ ತಲೆಕೆಡಿಸಿಕೊಳ್ಳೋದಿಲ್ಲ. ಅದರ ಜರೂರಿನೂ ಇಲ್ಲ. ಹುಡುಗ
ಎಲ್ಲಿ? ಬೇಗ ಹೇಳು.

**ಗಾಲಿಜ್‌ನ ಹೆಂಡತಿ** : *(ತನ್ನ ಗಂಡನಿಗೆ ಪ್ರಾರ್ಥಿ ಹಾಡು)*
ಶಿವಪಾರ್ವತಿ ಪುತ್ರನೆ, ದೇವಗಣದಲ್ಲಿ ಅತಿ ಶಕ್ತವಂತನೆ
ಎರಗುತೀನಯ್ಯಾ ನಿನ್ನ ಕಾಲಿಗೆ. ಓ ನನ್ನ ಗಂಡನೇ........
ನಿನ್ನ ಅಗಲಿಕೆ ನನ್ನನ್ನು ಬಡ ಮಾಡಿತ್ತಲ್ಲಾ!
ನನ್ನಾ ಕೈ ಹಿಡಿದವನೆ, ಕಡೆಗಣ್ಣ ನೋಟ ಯಾಕೆ?
ಗಂಡಯ್ಯಾ ಹೊರಬಾರದೆ ಮನೆಯ ನೊಗಭಾರ?
ನಾ ಮಗನ ಹೆತ್ತಿದ್ದು ಕೆಲಸಕ್ಕೆ ಬಾರದೆ?
ತಪ್ಪು ದಾರಿ ನಾ ತುಳಿಯಲು ನೀನೆ ಕಾರಣನಯ್ಯ
ನನ್ನ ಕನಸು ನುಚ್ಚುನೂರು ಮಾಡದಿರೊ, ದಮ್ಮಯ್ಯ
ನನ್ನ ಮಗಾ ನನ್ನಲ್ಲೆ ಉಳಿವಂಗೆ ಮಾಡೋ
ಅವನೆ ಮೂಲಧಾತು ಈ ಜೀವಕ್ಕೆ ಕಾಣೋ

ಬರಿಹೊಟ್ಟೆ ಅರೆಹೊಟ್ಟೆ ಕಟ್ಟಿ ಬೆಳೆಸಿದೆನವನಾ
ಮುರಿದ ಈ ಮನೆಯಲ್ಲೆ ನೀನೂ ಉಳಕೊಳ್ಳಯ್ಯ
ಇಲ್ಲೆ ಹೊಸ ಮನೆಯೊಂದ ಕಟ್ಟು, ನಿನ್ನ ದಮ್ಮಯ್ಯ
(ಮಗನಿಗೆ)
ಅಪ್ಪನ ಕಾಲಿಗೆ ಬೀಳೊ ನನ್ನ ಕಂದ
ಅಪ್ಪ ಅಪ್ಪಾ ಅಂತ ಬಾಯ್ತುಂಬ ಕರಿಯಪ್ಪ

**ಮೇಳ** : ತಂದೆಯ ಕಾಲಿಗೆ ಮಗನು ಬೀಳುವನು
ಮಗನ ತೋಳು ಓಡಿದೆತ್ತಿ ತೊಡೆಗೇರಿಸಿಕೊಳ್ಳುವನು

**ಗಾಲಿಜ್** : ಮಗಾ.......ದೂರದೇಶಕ್ಕೆ ಹೋಗುವಾ ನನ್ನೊಂದಿಗೆ ಬಂದೀಯಾ?
ನೀನಿಲ್ಲೆ ಇದ್ದು ತೊಂದರೆ ಯಾಕೆ ಪಡ್ತೀಯಾ?

**ಗಾಬರ್‌ಗಿಚೊರ್** : ನಮ್ಮ ಜೊತೆಗೆ ಅವ್ವಾನು ಬರಲಪ್ಪಾ. ನಾವು ಒಟ್ಟಿಗೆ ಇರೋಣ.ಅವ್ವನ ಬಿಟ್ಟು ಹೋದರೆ ನಮ್ಮನ್ನು ನೋಡಿ ಜನ ನಗ್ತಾರಪ್ಪಾ.

**ಗಾಲಿಜ್** : ಈ ಹಡ್ಡೀನ ಕೈ ಬುಡು ಮಗಾ. ನೀನು ಮಾತ್ರ ನನ್ನೊಂದಿಗೆ ಬಾ. ಇಂಥ ಅವಕಾಶ ನಿನಗೆ ಯಾವತ್ತೂ ಸಿಗಲ್ಲ.

**ಗಾಲಿಜ್‌ನ ಹೆಂಡತಿ** : ನನ್ನೊಂದಿಗೆ ನನ್ನ ಮಗಾ ಬದುಕು ಮಾಡ್ತಾನೆ
ಕಣ್ಮುಂದೆ ಇದ್ದು ನನ್ನುಸುರು ಆಗ್ತಾನೆ
ಅಯ್ಯಾ ನನ್ನ ನಾಶನ ಮಾಡಬೇಡ ಗಂಡಯ್ಯ

**ಗಾಲಿಜ್** : (ತನ್ನ ಮಗನ ತೋಳುಗಳನ್ನು ಬಲವಾಗಿ ಬಡಿಯುತ್ತ, ಹಿಡಿದು ಎಳೆಯುತ್ತ) ಬಾಮಗಾ ನೀನು, ನನ್ನೊಂದಿಗೆ ಬಾ ಮಗಾ, ನೀನು ಬರಲೇಬೇಕು ಬಾ ಮಗಾ.

**ಮೇಳ** : ಈ ಹೊತ್ತಿಗೆ ಸರಿಯಾಗಿ ಗಾದ್‌ಬಾದಿ ಬಂದನೋ
ಗಾದ್‌ಬಾದಿ ಬಂದಾ
ಮಗನು ತನ್ನವನೆಂದು ಅವನು ಸಾಧಿಸಿದನೋ
ಅವನು ಸಾಧಿಸಿದಾ
ಮೂವರಿಗೂ ಘನಘೋರ ಕಾದಾಟವಾಯಿತೋ
ಕಾದಾಟವಾಯಿತು
ಅಲ್ಲಿ ನೆರೆದ ಜನರೆ ಪ್ರತ್ಯಕ್ಷ ಸಾಕ್ಷಿ ಅದಕೆ
ಗಾಬರ್ ಗಿಚೊರ್‌ನ ತಾಯಿತಂದೆ ಬಗ್ಗೆ ಭಾರಿ ಚರ್ಚೆ

**ಪಂಚ** : (ಬರುತ್ತ) ನಾವು ನ್ಯಾಯ ಪಂಚಾಯಿತಿ ಮಾಡದೆ ಹೋದರೆ ಈ ಮೂವರ ಜಗಳ ಬಗೆಹರೀವಂಗೆ ಕಾಣಲ್ಲ. (ಗಾಲಿಜ್‌ನನ್ನು ನೋಡುತ್ತ) ಅವನೇ ಗಾಲಿಜ್........ಏ ಗಾಲಿಜ್!

**ಗಾಲಿಜ್** : ಏನಣ್ಣಾ.

ಪಂಚ : ಅವನೇ ಗಾಲಿಜ್. ಕೆಲಸ ಹುಡುಕೊಂಡು ದೇಶಾಂತರ ಹೋಗಿದ್ದ - ಹೆಂಡತೀನ ಮನೇಲಿ ಬಿಟ್ಟು. ಹೋದವನು ಹೆಂಡತಿಗೆ ಒಂದು ಪತ್ರ ಬರೀಲಿಲ್ಲ, ಒಂದು ಸುದ್ದಿ ಕಳಿಸಲಿಲ್ಲ. ಒಂದೈದು ರೂಪಾಯಿ ಎಂಓ ಕೂಡ ಮಾಡೋದು ಬೇಡವಾ? ಅದೆಂಥ ಅಸಡ್ಡೆನೊ! ಅದೆಂಥ ಮಾಯೆನೊ! ಜನ ಹೀಗೂ ಇರ್ತಾರ? ಸರಿ ಸರಿ. ಏ ನೀನು.....ಗಾಲಿಜ್‌ನ ಹೆಂಡತಿ, ಇಲ್ಲಿಗೆ ಬಾ...........ಅವಳು ಗಾಲಿಜ್‌ನ ಹೆಂಡತೀನೆ. ಅವಳ ಒಬ್ಬನೇ ಮಗ ಗಾಬರ್ ಗಿಜೊರ್. ಮಗಾ ಗಾಬರ್ ಗಿಜೊರ್ ಈ ಕಡೆ ಬಾ. ಈ ಹೀಮೆಯುವನು ಒಬ್ಬ ದೇಶಾಂತರ ಹೋಗಿದ್ದ. ಅವನು ಗಾಲಿಜ್‌ಸಿಗೆ ಮಗು ಹುಟ್ಟಿದ ಸಮಾಚಾರ ತಿಳಿಸ್ದ. ಈಗ ಗಾಲಿಜ್ ವಾಪಾಸು ಬಂದವನೆ. ತನ್ನ ಜೊತೇಲಿ ತನ್ನ ಮಗ ಬರದಿದ್ದರೂ ಬಿಡದೆ ಕರಕೊಂಡು ಹೋಗ್ತೀನಂತಾ ಹೇಳ್ತಿದ್ದಾನೆ. ಗಾಲಿಜ್‌ನ ಹೆಂಡತಿ ಹೇಳ್ತಾಳೆ - ನಾನು ಏನೇನೋ ಕನಸು ಕಟ್ಟಿಕೊಂಡು ಕೂಸು ಹೆತ್ತೆ, ಈಗ ಬೆಳಸ್ತಿದ್ದೀನಿ. ಗಾಲಿಜ್ ನನ್ನ ಮಗೂನ ಕರಕೊಂಡು ಹೋಗಾಕಾಗಲ್ಲ. ಅವನು ಮಗಾನ ಕರಕೊಂಡು ಹೋಗಲೇಬೇಕು ಅಂತಿದ್ದರೆ ನನ್ನೂ ಜೊತೇಲಿ ಕರಕೊಂಡು ಹೋಗಲಿ ಅಂತಾ. ಇದು ಅವರಿಬ್ಬರ ಮಾತಿನ ತಿರುಳು. ಗಾದ್‌ಬಾದಿ, ಈಗ ನಿನ್ನ ಸರದಿ. ಗಿಜೊರ್ ನಿನ್ನವನು ಅಂತ ಹೇಳ್ಕೊಂಡು ನೀನೊಬ್ಬನೆ ಬಂದಿದ್ದೀಯಲ್ಲ?

ಗಾದ್‌ಬಾದಿ : ಗಿಜೊರ್ ನನ್ನ ಮಗನಾಗಿರುವಾಗ ನಾನ್ಯಾಕೆ ಕೇಳಬಾರದು?

ಪಂಚ : ನೀನು ಗಾಲಿಜ್ ಹೆಂಡತೀನ ಮದ್ವೆಯಾಗಿದ್ದ?

ಗಾದ್‌ಬಾದಿ : ಇಲ್ಲ, ನಾನು ಮದ್ವೆಯಾಗಿಲ್ಲ.

ಪಂಚ : ಚಪ್ಪರ ಹಾಕಿ, ಸಿಂಗಾರ ಮಾಡಿ, ಆಡಂಬರದಿಂದ ಅವಳನ್ನು ಮದುವೆಯಾಗಿದ್ದ? ಲಗ್ನ ಪತ್ರಿಕೆ ಎಲ್ಲರಿಗೂ ಹಂಚಿದ್ದ?

ಗಾದ್‌ಬಾದಿ : ಇಲ್ಲಣ್ಣ. ನಾನು ಮದ್ವೆಯಾಗಿಲ್ಲ.

ಪಂಚ : ಹಾಗಾದ್ರೆ ಗಿಜೊರ್ ಹ್ಯಾಗೆ ನಿನಗೆ ಮಗನಾಗ್ತಾನೋ, ಅವಿವೇಕಿ.

ಗಾದ್‌ಬಾದಿ : ಅಣ್ಣಾ ನನ್ನ ಮಾತು ಸ್ವಲ್ಪ ಕೇಳಣ್ಣಾ. ನಾನು ನನ್ನ ಪಾಡಿಗೆ ನನ್ನ ದಾರೀಲಿ ಹೋಗ್ತಾಯಿದ್ದೆ. ಗಾಲಿಜ್‌ನ ಹೆಂಡ್ತಿ ದಿನಾ ಎದುರುಗಡೆ ಬರ್ತಿದ್ದಳು. ಆಗ ನನ್ನಿಂದ ಎಂಥದೋ ಒಂದು ತಪ್ಪು ಆಗಿಹೋಯ್ತು.

ಪಂಚ : ನೀನು ಇಂಥ ತಳಬುಡ ಇಲ್ಲದ ಮಾತೆಲ್ಲ ಹೇಳಬೇಡ. ನಡುದಾರೀಲಿ ಮಾಡಿದ ಯಾವುದೋ ತಪ್ಪಿಗೆ ಮಗಾ ಹ್ಯಾಗಯ್ಯಾ ಹುಟ್ತಾನೆ?

ಗಾದ್‌ಬಾದಿ : ಅದಕ್ಕೆ ನಾನು ಪ್ರಮಾಣ ಒದಗಿಸ್ತೀನಿ. ತಾವು ದಯಮಾಡಿ ಕೂರಬೇಕು.
ದಾರೀಲಿ ನನಗೊಂದು ಖಾಲಿಚೀಲ ಸಿಕ್ತು
ಆ ಚೀಲ ಹುಡುಕೊಂಡು ಅಲೆಮಾರಿ ಬಂದ

ಅದರಲ್ಲಿಟ್ಟ ದುಡ್ಡು ನಾನೆತ್ತಿಕೊಂಡು
ಅವನಿಗೆ ಬೇಕಿದ್ದ ಖಾಲಿಚೀಲ ಕೊಟ್ಟೆ

**ಪಂಚ** : ನಿನ್ನ ಸಂಗತಿ ಇನ್ನೇನು ಹೇಳಯ್ಯಾ, ಅಂದರೆ ನೀನು ಹಾಡು ಶುರು ಮಾಡ್ದಾ?

**ಗಾದ್‌ಬಾದಿ** : ನಾನು ಹಾಡ್ತಾ ಇಲ್ಲಾ, ನನ್ನ ಸಂಗತಿ ಏನು ಅಂತ ಹೇಳ್ತಾ ಇದ್ದೀನಿ.

**ಪಂಚ** : ಆದ್ರೆ ನನಗದು ಅರ್ಥ ಆಗಲ್ಲವಲ್ಲ, ಮಗಾ.

**ಗಾದ್‌ಬಾದಿ** : ಎರಡೇ ಎರಡು ಹೆಜ್ಜೆ ಮುಂದಿಟ್ಟು ಬಾರಣ್ಣ. ಅದನ್ನೆ ನಿನಗೆ ಬಿಡಿಸಿ ಹೇಳ್ತೀನಿ. ದಾರೀಲಿ ನನಗೊಂದು ಸಣ್ಣ ಚೀಲ, ಅಲ್ಲ ಒಂದು ದುಡ್ಡಿನ ಚೀಲ ಸಿಕ್ಕಿತು. ಅದರಲ್ಲಿ ನನ್ನ ಹಣ ಇಟ್ಟೆ. ಸ್ವಲ್ಪ ದಿವಸದಲ್ಲೆ ಆ ದುಡ್ಡಿನ ಚೀಲ ತನ್ನದು ಅಂತ ಹೇಳಿಕೊಂಡು ಯಾವನೋ ಬಂದ. ಅಣ್ಣಾ ನೀನೆ ನನಗೆ ಬಿಡಿಸಿ ಹೇಳು - ಅವನು ಖಾಲಿಚೀಲ ತಗೊಂಡು ಹೋಗಬೇಕಾ, ಇಲ್ಲ ಅದರಲ್ಲಿ ನಾನಿಟ್ಟ ದುಡ್ಡೂ ತಗೊಂಡು ಹೋಗಬೇಕಾ.........

**ಪಂಚ** : ಹಾಗಾದ್ರೆ ನೀನು ಈ ಮೊದಲೆ ನನಗೆ ಹೇಳಿದ್ದೀಯ, ಬಿಡು (ಪ್ರೇಕ್ಷಕರ ಕಡೆ ಮುಖಮಾಡಿ) ಈ ಬಡಪಾಯಿಗೆ ಚೀಲಾನೋ ದುಡ್ಡಿನ ಚೀಲಾನೋ ಏನೋ ಒಂದು ಸಿಕ್ತು. ಅದರಲ್ಲವನು ತನ್ನ ದುಡ್ಡು ಇಟ್ಟುಕೊಂಡ. ಸ್ವಲ್ಪ ದಿನ ಕಳೀತು. ಆಮೇಲೆ ಆ ಚೀಲ ಕಳಕೊಂಡವನು ಬಂದ. ಆಗ ಅವನು ತನ್ನ ಚೀಲ  ಮಾತ್ರ ಕೇಳಬೋದೆ ಹೊರತು ಅದರಲ್ಲಿ ಇಟ್ಟಿದ್ದ ದುಡ್ಡು ಕೇಳಾಕಾಗೊಲ್ಲ, ಗಿಚೊರ್ ನೀನು ಗಾದ್‌ಬಾದಿ ಜೊತೆ ಇರಪ್ಪ.

**ಗಾಬರ್‌ಗಿಚೊರ್** ; ಸ್ವಾಮಿ ನಾನೊಂದು ಮಾತು ಹೇಳಲಾ?

**ಪಂಚ** ; ಏನು ಹೇಳಬೇಕು ನೀನು? ಏನು ಹೇಳಬೇಕೊ ಹೇಳು ಆದರೆ ನೀನು ಗಾದ್‌ಬಾದಿ ಜೊತೆ ಇರು.

**ಗಾಬರ್‌ಗಿಚೊರ್** : ಪಂಚರೆ ದಮ್ಮಯ್ಯ ಪಕ್ಷಪಾತ ಮಾಡಬೇಡಿ
ಇಲ್ಲ ಅಂದರೆ ನೀವೇ ತಪ್ಪು ಮಾಡಿಬಿಡ್ತೀರಿ
ಚೀಲದ ಆಸಾಮಿ ನನಗೆ ತಂದೆ ಆಗ್ತಾನಾ?
ಅಪ್ಪ ಅವ್ವ ಅಂದರೆ ಏನೂ ಅಲ್ಲ ಅಂತಾನಾ?

**ಪಂಚ** : ಗಾದ್‌ಬಾದಿ ನಿನ್ನ ಮಗನ್ನ ಕರಕೊಂಡು ಹೋಗಯ್ಯ.

**ಗಾಲಿಜ್** : ಗಾಬರ್‌ಗಿಚೊರ್ ನನ್ನ ಮಗ. ಅವನ್ನಾ ಗಾದ್‌ಬಾದಿ ಹೇಗೆ ಕರಕೊಂಡು ಹೋಗ್ತಾನೆ?

**ಪಂಚ** : ಹೆಣ್ಣು ಮಾತ್ರ ನಿನ್ನವಳೋ, ಅವಿವೇಕಿ.

**ಗಾಲಿಜ್** : ಮಗಾನೂ ನನ್ನವನೇ.

**ಪಂಚ** : ನೀನು ನಿನ್ನ ಹೆಂಡತೀನ ಮದುವೆ ಮೆರವಣಿಗೇಲಿ ಡೌಲಿನಿಂದ ಮನೆಗೆ ಕರಕೊಂಡು ಹೋದೆ, ಅಷ್ಟೆ. ಆದರೆ ನೀನು ಒಬ್ಬ ಮಗನಿಗೂ ತಂದೆ

ಆಗಲಿಲ್ಲ. ನಿನ್ನ ಮಗನ್ನ ವಯಸ್ಸು ಎಷ್ಟು ಹೇಳು? ನೀನು ಎಷ್ಟು ವರುಷದ ಮೇಲೆ ದೂರದ ದೇಶದಿಂದ ತಿರುಗಿ ಬಂದೆ?

ಗಾಲಿಜ್ : ಕಳೆದ ಹದಿನೈದು ವರುಷದಿಂದ ದೂರದೇಶದಲ್ಲಿ ಬದುಕಿದ್ದೀನಿ. ನಾನೀಗ ಬೆಟ್ಟದ ಮೇಲಿದ್ದೀನಿ. ನನ್ನ ಮಗನ್ನ ಕರಕೊಂಡು ಹೋಗ್ತೀನಿ. ಮತ್ತೆ ನಾನಿಲ್ಲಿಗೆ ತಿರುಗಿ ಬರೋದಿಲ್ಲ.

ಗಾಲಿಜ್‌ನ ಹೆಂಡತಿ : ಮಗನಿಗಾಗ್ತೈತೋ ಹದಿಮೂರು ವರುಷಾ. ಬಂದಿದ್ದಾನೆ ತಂದೆ ಮಗನ ನೋಡೋಕೀಗ. ಇದ ಕಂಡು ನಗುತಾರೆ ಎಲ್ಲಾರು ಮುಸುಮುಸು. ಮೂರು ಬಿಟ್ಟವಗೆಲ್ಲೊ ನಾಚಿಕೆ, ಹೇಸಿಕೆ?

ಪಂಚ : ಇಂಥ ನಾಚಿಗೆಟ್ಟ ಹೆಂಗಸನ್ನ ಈ ಜಗತ್ತಲ್ಲಿ ನೋಡಿಲ್ಲ. ಎಲ್ಲಿಗಾದರೂ ಹೋಗಿ ತಲೆಮರೆಸಿಕೊ.

ಗಾಲಿಜ್ : ಕೂತುಕೊಂತೀಯಾ ಅಣ್ಣಾ, ನಾನು ನಿನಗೊಂದು ಆಧಾರ ಒದಗಿಸ್ತೀನಿ.
ನಾನೊಂದು ಕುಂಬಳ ಬಳ್ಳಿ ನೆಟ್ಟಿದ್ದೆ
ಅದು ನೆರೆಗುಡಿಸಲ ಮೇಲೂ ಹಬ್ಬಿತ್ತು
ನನ್ನ ಹಿತ್ತಿಲ ಬಳ್ಳಿ ನನ್ನದಾಗಿರುವಂಗೆ
ಅದರ ಕಾಯಿ ಕೂಡ ನನ್ನದೆ ಆಗಿತ್ತು.

ಪಂಚ : ನಾನು ನಿನ್ನ ವಿಚಾರ ಮಾಡ್ತಾಯಿದ್ದೀನಿ. ನೀನು ದ್ರುಪದ್‌ನಲ್ಲಿ ಹಾಡು ಶುರು ಮಾಡಿಬಿಟ್ಟ?

ಗಾಲಿಜ್ : ಅಣ್ಣಾ, ನಾನು ನನ್ನ ಕತೆ ಮಾತ್ರ ಹೇಳ್ದೆ.

ಪಂಚ : ನೀನು ಸುತ್ತಿ ಬಳಸಿ ಹೇಳುದ್ರೆ ನನಗೆ ಏನೂ ತಿಳಿಯಲ್ಲ, ಮಗಾ.

ಗಾಲಿಜ್ : ಅಣ್ಣಾ ನನ್ನ ಪಕ್ಕಕ್ಕೆ ಬರ್ತೀರಾ, ಬಿಡಿಸಿ ಹೇಳ್ತೀನಿ. ಎಲ್ಲಿಂದಲೋ ನಾನೊಂದು ಕುಂಬಳ ಬಳ್ಳಿ ತಂದಿದ್ದೆ. ಅದನ್ನ ನನ್ನ ಮನೆ ಹಿತ್ತಲಲ್ಲಿ ನೆಟ್ಟಿದ್ದೆ. ಅದಕ್ಕೆ ನೀರು, ಗೊಬ್ಬರ ಹಾಕಿದೆ, ಪೋಷಣೆ ಮಾಡಿದೆ. ಆ ಬಳ್ಳಿ ಬೆಳೆದು ಟಿಸಿಲು ಒಡೆದು ಪಕ್ಕದ ಗುಡಿಸಲು ಮೇಲೂ ಹಬ್ಬಿತು. ಅಲ್ಲಿ ಕುಂಬಳಕಾಯಿ ಬಿಡ್ತು. ಆ ಕುಂಬಳಕಾಯಿ ನನ್ನದೋ ಪಕ್ಕದ ಮನೆಯವರದೋ.....ನೀವೆ ತೀರ್ಮಾನ ಮಾಡಿ.

ಪಂಚ : ನೀನಿದನ್ನ ಮೊದಲೆ ನನಗೆ ಹೇಳಿದ್ದೀಯಾ. (ಪ್ರೇಕ್ಷಕರ ಕಡೆ ಮುಖಮಾಡಿ) ಈ ಬಡಜೀವಿ ಎಲ್ಲಿಂದಲೋ ಕುಂಬಳ ಬಳ್ಳಿ ತಂದ. ಅದನ್ನ ತನ್ನ ಮನೆ ಹಿತ್ತಲಲ್ಲಿ ನೆಟ್ಟ, ಚೆನ್ನಾಗಿ ನೋಡಿಕೊಂಡ. ಅದು ನೆರೆಮನೆ ಹುಲ್ಲಿನ ಛಾವಣಿ ಮೇಲೆ ಹಬ್ಬಿತು. ಅಲ್ಲಿ ಕುಂಬಳಕಾಯಿ ಬಿಡ್ತು. ನೆರೆಮನೆ ಹುಲ್ಲಿನ ಹೊದಿಕೆ ಯಜಮಾನ ಕುಂಬಳಕಾಯಿ ತನ್ನದು ಅಂತಾ ಹೇಳಕಾದಾತಾ? ಬಳ್ಳಿ ಯಾರದೋ ಕುಂಬಳಕಾಯಿನೂ ಅವರದೇ. ಗಾಬರ್‌ಗಿಜೊರ್, ನೀನು ಗಾಲಿಜ್ ಜೊತೆ ಬದುಕು ಮಾಡು ಕಂದಾ.

ಗಾಬರ್ ಗಿಚೊರ್ : ಅಣ್ಣಾ, ನಾನೊಂದು ಮಾತು ಹೇಳಬೇಕಾಗಿದೆ.

ಪಂಚ : ನೀನೇನು ಹೇಳಬೇಕು? ಏನು ಹೇಳಬೇಕೊ ಹೇಳು. ಆವರೆ ಗಾಲಿಜ್‌ನ ಜೊತೆ ಹೋಗು.

ಗಾಬರ್ ಗಿಚೊರ್ : ದಮ್ಮಯ್ಯ ನೀವೆಲ್ಲ ಕೇಳಿಸಿಕೊಳ್ಳಿರಿ
ಅಪ್ಪನ ಮಾತು ಅಪ್ಪಂಗೆ ಹುಟ್ಟಿದವನ ಮಾತು
ಕಡೆಗಣಿಸಿದ ಮಗಾಽ ನಾನು ಕಾಣಿರಿ
ಇದಕ್ಕಿಂತ ಹೆಚ್ಚಿಗೆ ನಿಮಗೇನು ಹೇಳಬಲ್ಲೆ?

ಪಂಚ : ನಿನ್ನ ಮಗನ್ನ ಕರಕೊಂಡು ಹೋಗಯ್ಯಾ, ಗಾಲಿಜ್......ಅವನಾ ಕರಕೊಂಡು ಹೋಗು.
(ಮೂವರೂ ಹುಡುಗನನ್ನು ಹಿಡಿದು ಕೊಳ್ಳುತ್ತಾರೆ. 'ಇವನು ನನ್ನ ಮಗ' ಇವನು ನನ್ನ ಮಗ, ನನ್ನ ಮಗ' - ಎಂದು ಗಟ್ಟಿಯಾಗಿ ಕೂಗುತ್ತಾರೆ.)

ಗಾಲಿಜ್‌ನ ಹೆಂಡತಿ : ಏ ಅಣ್ಣಯ್ಯಾ, ಅವರಿಬ್ಬರೂ ನನ್ನ ಮಗನ್ನ ತೋಳು ಓಡಿದು ಎಳೆದೂ ಎಳೆದು ಕಿತ್ತು ಹಾಕಿ ಬಿಡ್ತಾರೆ. ಅಣ್ಣಯ್ಯ, ನಿಮ್ಮ ದಮ್ಮಯ್ಯ ಅವರಿಗೆ ಹಾಗೆ ಮಾಡಬೇಡಿ ಅಂತಾ ಹೇಳ್ರೀ.

ಪಂಚ : ಸುಮ್ಮನಿರು. ನಿನ್ನ ಮಗನ ತೋಳು ಕಿತ್ತುಹಾಕೋ ಗುಂಡಿಗೆ ಯಾರಿಗಿದೆ? ನನ್ನ ಮುಷ್ಠಿ ಏಟಿಗೆ ಅವನು ನರಕಕ್ಕೆ ಹೋಗಿ ಬೀಳ್ತಾನೆ.

ಗಾಲಿಜ್‌ನ ಹೆಂಡತಿ : ನಿಮ್ಮ ನ್ಯಾಯದೊಂದಿಗೆ ನರಕಕ್ಕೆ ಹೋಗಬೇಕು, ಅಷ್ಟೆ.

ಪಂಚ : ನೀನು ಸುಮ್ಮನೆ ಸಿಟ್ಟಿಗೇಳ್ತಿದ್ದೀಯಾ.

ಗಾಲಿಜ್‌ನ ಹೆಂಡತಿ : ಯಾಕೆ? ನನಗೆ ಸಿಟ್ಟು ಬರಬಾರದಾ? ನೀವು ನನ್ನ ಮಗನ್ನ ಒಂದು ಸಲ ಇವನಿಗೆ, ಇನ್ನೊಂದು ಸಲ ಅವನಿಗೆ ಕೊಡೋಕೆ ತುದಿಗಾಲ ಮೇಲೆ ನಿಂತಿದ್ದರಲ್ಲ.....ಅವನು ನನ್ನ ಮಗ ಆದರೂ ನನಗೆ ನೀವು ಏನೂ ಕೇಳೇ ಇಲ್ಲ. ಗೊತ್ತಾ?

ಪಂಚ : ನೀನು ಅಳೋದು, ಮಾತಿನ ಮಧ್ಯ ಮೂಗು ತೂರಿಸೋದು ಮಾಡುದ್ರ ನಿನಗೆರಡು ಬಾರುಸ್ತೀನಿ. ನಿನಗೇನು ಕೇಳೇ ಇಲ್ಲ ಅಂತ ಹೇಳಕೊಂಡು ಅಷ್ಟೊತ್ತಿನಿಂದ ಅಳ್ತಾನೆ ಇದ್ದೀಯಾ? ಇದೆಲ್ಲ ಮಾಡೋಕೆ ಮುಂಚೆ ನೀನು ಯಾರನ್ನ ಕೇಳ್ದೆ?
ಬಾ ಇಲ್ಲಿ, ಈ ಕಡೆ ಬಾ, ನಿನಗೂ ಕೇಳ್ತೀನಿ. ಹೇಳು ಗಾಪ್‌ಬಾದಿ ಜೊತೆ ನಿನಗೇನು ಸಂಬಂಧ? ಅವನೇ ನಿನ್ನ ಬೆನ್ನಹಿಂದೆ ಬಿದ್ದಿದ್ದನೇ ಇಲ್ಲಾ.......

ಗಾಲಿಜ್‌ನ ಹೆಂಡತಿ : ಅಣ್ಣಯ್ಯ ನೀವು ಕೇಳ್ತಾ ಇದ್ದೀರಿ.......ನಾನೂ ಹೇಳ್ತಿನಿ. ಈ ಗಾಪ್‌ಬಾದಿ ದಿನಾಲು ಬೆಳಿಗ್ಗೆ ಸಂಜೆ ತಪ್ಪದೆ ಬಂದು ನನ್ನ ಕಾಣ್ತಾಯಿದ್ದ.

ಪಂಚ : ಅವನು ಮಧ್ಯಾನ ಬಂದು ನಿನ್ನ ಕಂಡಿರಬೌದು ಅಲ್ವಾ? ಥಗೆಗೆ ಬೊಪ್ಪೆ

ಗಿಜಿಗುಟ್ಟುವ ರಸ್ತೆಗಳೆಲ್ಲಾ ಬೋಳು ಬೋಳು
ನಕ್ಕ ದನಿಯೂ ಕೇಳಲಾರದ ದಗ್ಗತ್ತಲಲ್ಲಿ
ಅಲ್ಲಿ ಮುಖಾಮುಖಿ ಎಲ್ಲಿ ರಸ್ತೆಗಳಿಲ್ಲಿ

ಮತ್ತೆ ಬೆಳಕಿಗೆ
ಕಾಯಬೇಕು
ಬೆಳಕಾಗಬೇಕು.

## ಕೇಳಿ

ಹೌದಲ್ಲೋ ಹುಡುಗಾ
ಎಷ್ಟೊಂದು ಚೆಂದ ಈ ನೆಲ
ಕಪ್ಪು ನೆಲದೊಳಗೇ ಪ್ರೀತಿ ಜಲ
ಹೌಹಾರಿ ಬಿಡೋ ಹುಡುಗಾ ಹಾರಿ ಬಿಡೋ

ನಡುದಾರಿಯಲ್ಲೆಲ್ಲಾ ಬಳಸಿ
ಬಳಸುತ್ತಾ ಇಳಿಸಿಬಿಡು ಇಕ್ಕೆಲಗಳಲ್ಲಿ ಅಲ್ಲಿ
ನೋಡೋ

ಗೆಂಡೆ ಎಲೆ ಚಿಗುರು, ಮರ ಸೇಬು, ಕಳಿಲೆ
ನೇಗಿಲುಗಳಲೆ ಆರಂಭ ಮಾಡೋ
ಏಳೋ ಏಳೇಳು ಸೀಳುಗಳಲ್ಲೆಲ್ಲಾ ಉಕ್ಕಿ
ಉಕ್ಕಿ ಹೊಡೆದು ಹಾ ನೆಲ!

ಕನಸಿನ ಗುಲಾಬಿ ಅರಳುತಿದೆ
ಅರಸುತ್ತಾ ಇಲ್ಲೆಲ್ಲಾ
ನೋಡಿಬಿಡು ಮತ್ತೆ
ಮೆತ್ತಗೇ ಮುತ್ತಿಟ್ಟು ತಣ್ಣಗೇ ಸವರಿ ಬಿಡೋ
ಬಾಳೆ ಹಸಿರು
ಎಲೆ ಎಲೆಗಳಲೇ ಮೊಗ್ಗುಗಳನ್ನು
ಮೊಗ್ಗೊಡೆಯುವಾಗಲೇ
ಬಿಚ್ಚಿಬಿಡೋ ಈ ಪರಿ

ತೊರೆಯ ನೀರ ಬಿಟ್ಟು ಬಿಡೋ
ಮೈ ರಕ್ತಮೊಳಗೆಲ್ಲಾ ಹರಿದು ಚಿಮ್ಮಿ ಹಸಿರು
ಎಲ್ಲೆಲ್ಲಿ ಸುಗ್ಗಿ ಬಿಡಲಿ ಹೇಳೋ
ಅಲ್ಲಲ್ಲಾ ಬಿತ್ತಿ ಬಿಡೋ ಆ

ಝರಿ
ಜಿತ್ತುತ್ತಾ ಮುತ್ತಿ-ಮುತ್ತಿಕ್ಕಿ
ನೀನೇ

ತಣಿದು ಬಿಡೋ ಈ ನೆಲ
ಇಲ್ಲಿ ನೋಡೋ
ನೀನೇ ಅರಳಿಬಿಡೋ
ಎರಡು
ಹೂ

## ನೇಣು

ಖಾಲಿ ಮನೆಯಲ್ಲಿ
ಗಿಜಿ ಗಿಜಿ ಶಬ್ದ ಎಂಥದೋ ಹೆಜ್ಜೆ ಶಬ್ದ
ಬಿಳಿಯ ಬಟ್ಟೆ ಧರಿಸಿ ಬಾಯಿಗೂ ಬಿಳೀ
ಬಟ್ಟೆ - ಮೌನ
ಕಲ್ಯಾಣ

ಬಳೆಯ ಶಬ್ದ ಬಳೆ ಒಡೆಯುವ ಶಬ್ದ
ಒಡನೇ ನಿಂತು
ಹೆಣ ಕುಯ್ಯುವ ಮನೆ ತುಂಬಾ
ಹರಿದ ಬೆವರು, ಹೆಣದ ಮನೆ ಇಳಿಜಾರಲ್ಲಿ

ಕರಗುತ್ತಾ ಕುಂಕುಮ
ಮೂಲೆಯ ನಕ್ಷತ್ರ ರಾಶಿ ವಿಷ-ನೀಲಿಕಪ್ಪು
ಇನ್ನು ಕುಯ್ಯಬೇಕು
ಹೆಣ...!

ಹಣ ಕೊಡದಿದ್ದರೆ ಕೊಡುವುದಿಲ್ಲ ಆ
ಹೆಣ!

'ಸೂರ್ಯನನ್ನು, ಚಂದ್ರನನ್ನು, ಸಕಲ ದಿನಗಳನ್ನೂ
ತಿಕ್ಕಿಯಾದರೂ, ಕೊಡುತ್ತೇನೆ - ಚಿನ್ನದ ಕಿರೀಟವಿಟ್ಟು
ಪಾದಕ್ಕೆರಗಿ ಹಣ - ನಿಮ್ಮ ಋಣ'
ಆದರೂ ಕಣ್ಣಾರೆ ತೋರಿಸಲಿಲ್ಲ
ಹೆಣ

ಬಟ್ಟೆಯಲ್ಲೇ ಸುತ್ತಿಟ್ಟ ಮಾಂಸ

ಚಂದ್ರ ಶಿಕಾರಿ - ಕಲ್ಲಂಗಡಿ
ಝುಣ ಝುಣ ಉರಿಜಿಸಿಲು-ಚರ್ಮದೌತಣದ ಸಾಮ್ರಾಜ್ಯ
ಸಾವಿರಾರು ಹಾವು - ಜತೆಗೇ ನೊಣ
ಹೊಟ್ಟೆಯಲ್ಲೇ ಸತ್ತ ಭ್ರೂಣ-ಕರುಳು
ಕಡು ನೀಲಿ ಸೂರ್ಯ

ಶರಶಯ್ಯೆಯಲ್ಲಿ...
ತಿಥಿಗೆ ವಡೆ ಕರಿಯುವ ವಾಸನೆ
ಕೆಟ್ಟ ಎಣ್ಣೆ, ಅನಾಥ ನಗು, ದಿಕ್ಕೆಟ್ಟ ಆಟ
ಸ್ಕೂಲು ಬಸ್ಟಾಂಡು-ಸೀಳಾದ ಬುಗುರಿ
ಅಕಾಲ ಮೃತ್ಯು - ಬಿಳೀಪಗ್ಗ - ಧೂಳು ಗಾಳಿಪಟ
ಎಮ್ಮೆ ಕೊರಳು-ಮುಳ್ಳು ತಂತಿಗಳಿದ್ದ ರಸ್ತೆ ತಲೆ
ಕಾಲು ಸುತ್ತು - ಓಲಗ.....

ಗಂಡ
ಎದ್ದುಬಾರನು, ಮಾತಾಡನು ಇನ್ನು
ಮೌನ - ಕಾರಿರುಳ ಕೊರೆಯುವ ನವಿಲ ಕಂಪನ

ಅರಿಶಿಣ ಒಡೆದ ಕನ್ನಡಿಯಲ್ಲಿ
ಸಂಜೆ ಏಳರ ಸಮಯ - ಸೂರ್ಯ ಹೋಳಾದ
ಬಾಯಿ ತುಂಬಾ ಬಿಳೀ
ಬಟ್ಟೆ - ತಬ್ಬಲಿ ಬಿಕ್ಕಳಿಸಿ
ತಲ್ಲಣ.... ಚೂರಾದ ಬಳೆಗಳ ನೆಲದಿಂದ....
ಕುಯ್ಯಲು ಇನ್ನೊಂದು ಹೆಣ
ಖಾಲಿ ಮನೆಯಲ್ಲಿ
ನೇಣು.....

## ಬೀರೂರು ರೈಲ್ವೆ ಸ್ಟೇಷನ್

ಕತ್ತಲಲ್ಲೂ ಕಣ್ಣು ಕೋರೈಸುವ ಹಳಿ
ಪಕ್ಕೆಯೆಲುಬುಗಳಲ್ಲೂ
ಅನುಭವಿಸಲೇಬೇಕು ಕತ್ತಿಯಲುಗಿನ ಛಳಿ

ಶಿವಾಜಿಯಲ್ಲೆರಡು ಪೆಗ್ಗು ರಮ್ಮು
ಮೊರಟಾಗ ಕೆಲವು ನಿಮಿಷಕ್ಕೇ ಶಶಿಧರನ
ಕಾಲುಗಳು ಸ್ಟೇಷನ್ ಬಳಿ

ರೈಲುಹಳಿ, ತುಂಡು ಸೇತುವೆ
ಅಲ್ಲಿ ಚಳಿ ಚಳಿ, ಒಣಗುತ್ತಿರುವ ಗಂಟಲು
ಕೊಚ್ಚೆ ಬೀರೂರು

ಸೋಗೆ ಕಾಂಪೌಂಡಿನ ಒಳಗೆ
ಮಿಣಿ ಮಿಣಿ ಸೀಮೆ ಎಣ್ಣೆ ಸೊಡರು
ಸೋಗೆ ಬೇಲಿಗೊಂದು ಸೋಗೆಯದೇ ಗೇಟು
ಗೇಟಿಗೊಂದು ಬೀಗ
ತೆಗೆದಾಗ ಇವಳು ಇಲ್ಲಿವರೆಗೂ ಕರೆತಂದಳಲ್ಲಾ!
ಬೇಲಿಯೊಳಹೊಕ್ಕು ಇಣುಕಿ ಆಚೆ
ಕೆಂಪು ಸಿಗ್ನಲ್ಲು
ಮೇಲೆ ಚಂದ್ರನ ಬೆಳಕು, ಪೋಲಿಸರ ಕಾಟ.....?
೧೯೯೩-ಮೇ ಇಪ್ಪತ್ತೇಳನೇ ತಾರೀಖು!

ಕೊಟ್ಟ ಐವತ್ತಕ್ಕೆ
ಖುಷಿಪಟ್ಟು ಮೊಲೆ ತೆಗೆದು ಅಂಗಾತ
ಏನು ಮಾಡಲಿ ಈಗ
ಅನುಭವಿಸಲೇಬೇಕೆಂದು
ಬಂದ ಮೇಲೂ ಅಂಗಾಂಗ
ಹಳ್ಳಿ ರಸ್ತೆ ಹುಣ್ಣಿಮೆ ಸೆರಗ ಚೆಲ್ಲಿದ ಇವಳ
ಮಗ್ಗುಲಾದರೂ ಮಗುವಂತೆ ಬಿಡದ ಮದ
ಕೈಗೆ ದಕ್ಕಿದ ಉನ್ಮತ್ತ ಯೋನಿ ಕನಸು

ಏಳು ತಿಂಗಳಾದರೂ
ಕಾಣದ ಆ ಅದ ಮುಟ್ಟೆ
ಇದೇನಿದು ಹೇಳಲಾರೆಯಾ ಹೆಣ್ಣೇ
ಏನಿಲ್ಲಿ ಕೊಟ್ಟೆ, ಯಾಕಿಲ್ಲಿ ಬಂದೆ, ಯಾವ ಜೀವನ...?

ಶಿಖರಕ್ಕೇರಿ ಸಂದಿ ಬಾಳೆ ಎಲೆ ಗಾಳಿ
ಪ್ರಶ್ನೆಮಳೆಗೇ ತತ್ತರಿಸಿ ವ್ಯಥೆ
ಮಕ್ಕಳೆರಡು-ಮೊನ್ನೆ ತಾನೆ ತೀರಿದ ಗಂಡನ ಕಥೆ!
ಏನು ಮಾಡಲಿ ಈಗ-ಎಂದೇ ಕೊನೆ
ಅಲ್ಲೆದ್ದ ಶೂನ್ಯ ಕಣ್ಣು ಬಿಟ್ಟರೆ
ಹುಣ್ಣಿಮೆಯೇ ಕಡೆದು ಚೆಲ್ಲಿದ
ಸೊರೆಹಾಲು ಮೊಸರು ಬೆಣ್ಣೆ-ಕಜ್ಜಿ ತೊಡೆ ಮೇಲೆ
ಜ್ವರ ಬಂದ ನಾಲಿಗೆ ಅವಳ
ಮೆತ್ತನೆ ಸೋಗೆ ಒಳಗೆ

ಕೇಳಿದರೆ-ಊರು ತಮಿಳುನಾಡು
ಮೋಟುಗೋಡೆಯ ಮೇಲೆ ರೋಗಿ ಚಂದ್ರ
ಮಿಣಿ ಮಿಣಿ ಬೆಳಕು - ಸೊಡರ ಆ
ಜೇಡಕಲ್ಲಿ ಕಣ್ಣಿಗೆ ಕಣ್ಣು ಕೊಟ್ಟಾಗ ಕತ್ತರಿಸಿ ಹಸಿವು
ಕಣ್ಣನ್ನೇ ಮಾರಿದಳೋ ಇವಳು
ಹಿಂದೆ ಮುಂದೆ ಗರುಕೆ ಚಿಗುರೊಡೆದು
ಕೊಟ್ಟೆ ಐವತ್ತಕ್ಕೇ ತೊಡೆತೆರೆದು.

ಈಗಲೂ ಕನ್ನಡಿಯಲ್ಲಿ ಕಂಡಂತೆ ಹಿಂಬಾಲಿಸುತ್ತಿರುವಂತೆ
ಕಜ್ಜಿ ತೊಡೆ ಇವಳು ನೆನಪಾಗುತ್ತಾಳೆ
ಬಾಗಿಲ ಬಳಿ ಕಣ್ಣಾರೆ ನೋಡುತ್ತಾ
ನಿಂತ ಬಿಳಿ ಕೆನ್ನೆ ಮೇಲೆ ಜಿಡ್ಡಾದ
ತಲೆಗೂದಲೊಳಗೆ ಬೆರಳು ಹರಿಸಿ
ತುಂಬುಮೊಲೆಯವಳ ಮೈಸವರಿ, ತೊಟ್ಟು, ಬಟ್ಟೆಯ ಸವರಿ
ನಿಡುಸುಯ್ದು ಗಂಟಲೊಳಗಿಂದ ಅಲ್ಲಿಂದ ಬಾಯಾರಿ
ಕಣ್ಮರೆಯಾದರೂ ಕಾಣುತ್ತಲೇ ರಸ್ತೆ ಉದ್ದ
ತೊಡೆ ಮೇಲೆ ಕೆನೆ ಹಾಲು ಮೊಸರು
ತುಪ್ಪಕ್ಕೇ ಕಾದಿಟ್ಟ ಬೆಣ್ಣೆ-ಆರಿದ ಒಲೆ
ಜೇಡ ವಿನ್ಯಾಸ ಮೋರೆ
ಸತ್ತ ಗಂಡನ ನೆನೆದ ಎರಡು ಮಕ್ಕಳ ತಾಯಿ
ಕತ್ತಲೆ ಸೆರಗಲ್ಲಿ ಚಂದಿರನ ಸಾಗರ
ಕಡೆಸಿದ ಮುಂಡೆ
ಕಿತ್ತ ಮಂಡಿಯ ಬಿಟ್ಟೂ ಬಿಡದೆ
ಮುತ್ತಿಟ್ಟೆ ಅವಳ ಹೆಸರೋ....?
ಮತ್ತಲ್ಲೇ ಕೆಡಪಿಕೊಂಡವಳ ಕೊಳೆತ ಉಸಿರೋ
ನೆನಪಲ್ಲಿ ಅನುಕ್ಷಣವೂ ಉರಿಯುತ್ತಾಳೆ ಶಶಿಧರಾ

ಊರಲ್ಲಿದ್ದ ಹೆಂಡತಿಗೆ ಹೇಳಿದರೆ...
ಫಿಟ್ಸ್ ಬಂದೀತು, ಎಂದವಳೇ ನಕ್ಕು ಮಕ್ಕಳಿಬ್ಬರ
ಕಾರು, ಜೀಪು, ಸೈಕಲ್ಲು ಕಾಲಿಲ್ಲದ ಗೊಂಬೆ ಬಲೂನು
ಆಟ ಆಡಿಸುತ್ತಲೇ ಹುಸಿ ಸಿಟ್ಟು

ಕಣ್ಣಿಗೆ ಕಣ್ಣು ಕೊಟ್ಟೆ
ಕಣ್ಣು ಕೋರೈಸುವ
ರೈಲು

ಹಳಿ ಇವಳು
ಸಿಳ್ಳೆ ಹಾಕುತ್ತಾ ಸೆರಗ
ಪಕ್ಕದಲ್ಲಿ
ಮಗಳು.

## ಪ್ರೇಮ

ಸ್ಮಿತಾ
ಬಂಗಾರದ ಬೆಳಕಲ್ಲಿ ಸಂಜೆಯಲ್ಲರಳುವ
ಚಂದಿರಾ
ಅಲ್ಲೇಳು ವಜ್ರಗಳಾ ಮುಡಿ
ತುಂಬಾ ಮುಡಿದ
ಹೆಣ್ಣೇ

ಕಟ್ಟಿಕೊಂಡ ಹೆಡೆ ಮನಸ್ಸು
ಕಪ್ಪು ಮಿರಿ ಮಿರಿ
ಸೋಮಾರಿ ಆ ಮಣ್ಣ ದಾರಿಯಲ್ಲಿ ಬಳುಕಿ
ಹೊಳೆಯುತ್ತಾ
ಗಂಭೀರ ಸಾಗುವ ನಾಗರ

ಹುಡುಕಿದರೂ ಸಿಗಲಾರದ ಕೇಕು ಅಂಗಡಿಗಳಲ್ಲಿ
ಕತ್ತರಿಸುವ ಚಾಕು

ಸ್ಮಿತಾ
ಎರಡೂ ಅಂಗೈ
ಬಟ್ಟಲ ಹಿಡಿದು ಹಣತೆ
ಉರಿಯುತ್ತಿದೆ ದೀಪಾವಳಿ ದೀಪ
ಕಾಯುತ್ತಿದೆ
ಅದರದೇ ಶಬ್ದ ಮಾತು ಘಳಿಗೆ
ಬಾರೋ ಬಂದು ಬಿಡೋ ಎನುವ ಕಣ್ಣಗುಳಿ

ಈ ಹೊತ್ತಲ್ಲಿ ಹೊತ್ತ
ಹೆಡನಾಗರ ಮಿಡಿವ ಸ್ವಪ್ನ

ಸ್ಖಲನದಲ್ಲೆಲ್ಲೋ
ಎದ್ದ
ಒದ್ದೆ

ಯಮುನೆಯ ಇಬ್ಭಾಗಿಸುವ ಭಗವದ್ಗೀತೆ
ಕೃಷ್ಣ
ಪದಿಪರೆಯದವಳೇ
ನಿಂಬೆ ಮೊಲೆ ತೊಟ್ಟ
ಒತ್ತಡಕೆ ತೊಡೆಯಲ್ಲೇ
ಕ್ಷಣ ಕಾದೂ
ದೊಡ್ಡವಳಾದ ಮುದುಕಿಯೇ
ಚೆಂಗುಲಾಬಿಯನೆ ಮುಡಿದ ಕೆಂಪನೆಯ
ಯೋನಿಯೇ
ತಾಜಮಹಲಿನಲ್ಲೇ
ಸೂರ್ಯನ ವಂಚಿಸಿದ ನಯವಂಚಕಿಯೇ

ಬಂದು ಬಿಡು
ಕನಸ ನಾಯಿ - ಹಾಯ್ದು ಬಿಡು
ಉಚ್ಚೆ ಹುಯ್ಯುವ ಜಾಗದಲ್ಲಿ
ಮತ್ತವರ ಪ್ರೇಮಿಗಳು ಯೋಜನದಾಚೆಯಿಂದಲೂ
ಬಂದು ಮೂಸುವ ಹಸಿರು
ಬಿದ್ದೊದ್ದಾಡುವ ಗರಿಕೆ ಹುಲ್ಲ ತಾಣದಲ್ಲಿ

ಸ್ಮಿತಾ
ನಾಗರ ಹೆಡೆಯೊಳಗಿನ ಬೆಳ್ಳಿ
ತಿಕ್ಕುವ ಅವನ ತಲೆ ಪೊದೆ ತುಂಬಾ
ಭಯದ ಭ್ರಮೆ
ಮಿಡಿ ತೊಟ್ಟ ಹುಡುಗಿಯರ
ಹಿಂದೆಯೇ ಹೊರಹೊರಟು
ಪರಿ ಕಳಚುವ
ನಿಡಿದಾದ ನಿಟ್ಟುಸಿರೇ ಮಿಥುನ
ಕ್ಷಮೆ!

ತುಂಬುಗೂದಲಲ್ಲಿ ಅನುರಣನ
ಮಳೆಯ ಸೂರ್ಯಾ
ನೀನೂ ಕಾಮಿಯಾ...?

ಕೈಸವರಿದಾದ ಅಲ್ಲಿ ಗುಟ್ಟಲ್ಲಿ
ಪ್ರೇಮಿಸಿಬಿಡು ತಳಾ ತಳದ ಬಾಲವ
ಅಹೋ... ಯಾಕೆ ಮುಟ್ಟುತ್ತೀಯಾ

ಮರದಲ್ಲಿ ಮರ್ಮರದ
ನೆಲ್ಲಿಕಾಯಿ ಕೆಡವಿ-ಚೈತ್ರರೆದೆ ಗುದ್ದಿ
ಮಿಡಿಮಾವಲ್ಲಿ ಇಡೀ ಹೀಚು ಎದೆ ಅವುಚಿ
ಇನ್ನೇನು ತಿನ್ನಬೇಕು ಸ್ಮಿತಾ.....

ಮರದಲ್ಲೊಂದು ಗೂಡು
ಗೂಡಲ್ಲೊಂದು ಕೊಕ್ಕು!
ಅದೇನು ಹೆಡೆಯಾ....?
ಮರದ
ಮರ್ಮದ ಕೊಳಲು

ನಡೆದಾಗ ಇಡೀ ತೋಟ
ಮುಸ್ಸಂಜೆಗತ್ತಲೆ ಮಂಜು
ಕತ್ತಲೆಯೇ ಮೈ ದಾರವಾಗಿ
ನಡೆಯುತ್ತಾ ಶೂನ್ಯ
ಕೊಳಲ ಬಣ್ಣ ಗಾನ ಸೂರ್ಯಕಿರಣ
ಕರೆದ
ಹಿಂಡಿಕರೆದ-ಕೈಸೋತ
ರಕ್ತ ಮಿಶ್ರಿತ ಬೆಳದಿಂಗಳು

ತೊಟ್ಟಲ್ಲಿ
ತೊಟ್ಟಿಲಲ್ಲಿ
ಕೂದಲೊಳ ಇಂಚರದಲ್ಲಿ
ಮಂಜು ಮುತ್ತಿಕ್ಕಿದ ಕಣಿವೆ ಬಟ್ಟಲಲ್ಲಿ
ಮುಗುಳುನಗೆ
ಬಣ್ಣ ಹಾಸಿಗೆಯಲ್ಲಿ ಬುಸುಗುಟ್ಟುತಾ....

ತಳುಕು ಹಾಕಿಕೊಂಡ ಜೋಡಿನಾಗರ
ನೋಡಿದಾಗದರೊಳಗೊಂದು ಬುಸುಗುಟ್ಟಿ
ಬೆರೆಸಿಕೊಂಡೋಡಿಸಿ ಕನಸು ತೊಟ್ಟ
ಬಟ್ಟೆ ಸೋರುತ್ತಿದೆ
ನೆನೆಯುತ್ತಿದೆ ನೆಲ
ತಳ ಮುಟ್ಟುವವರೆಗೂ ತಣಿಸಿ
ಗೂಡಳ ಸೇರಿ ದಣಿಸಿದರೂ
ಹಿಂಬಾಲಿಸುತ್ತಿರುವ ಇನ್ನೊಂದು ಹೆಡೆ

ಓಡಿ ಓಡಿ ಕಾಡುತ್ತಲೇ

ಮನಸಲ್ಲಿ ಅನುಕ್ಷಣವೂ ಕಾಡಿ
ಓಡೋಡಿ ಅದೇ ಬಿಡದೇ
ಓಡಿ ಬಂಡೆ ಮೇಲೇರಿ ಆಕಾಶ ಜಿಗಿಯುವ
ಬಿಸಿ ಉಸಿರಿಗೆ
ಭೂಮಿ ಹುಟ್ಟಲ್ಲಿಂದ
ಕಾಯುತ್ತಾ ಇರುವ
ನಾಗರ ಹೆಡೆ

ನಿಧಿ
ಅಲ್ಲೇ ಪ್ರೇಮ
ಮಂದಸ್ಮಿತ

# ವಯೋಧರ್ಮದ ಆಟಗಳು

ಬಿಳುಮನೆ ರಾಮದಾಸ್

ನಾನು ಚಿಕ್ಕವನಿದ್ದಾಗ ಮದುವೆ ಮನೆಗೆ ತಿರುಗುವ ಹವ್ಯಾಸವನ್ನು ಇಟ್ಟುಕೊಂಡಿದ್ದೆ. ಅಂದಿನ ದಿನಗಳಲ್ಲಿ ಈಗಿನಂತೆ ಕಲ್ಯಾಣ ಮಂಟಪಗಳಿರಲಿಲ್ಲ. ಹಳ್ಳಿಗಳಲ್ಲಿ ಮನೆಗಳಲ್ಲಿಯೆ ಮದುವೆಗಳು ನಡೆಯುತ್ತಿದ್ದವು. ಮದುವೆ ಮನೆಗೆ ತಿರುಗುವ ನೆಪದಲ್ಲಿ ನಮ್ಮೂರಿನ ಸಮೀಪದ ಹಳ್ಳಿಗಳನ್ನು ಮನೆಗಳನ್ನು ಕಾಡನ್ನು ಹಳ್ಳಕೊಳ್ಳಗಳನ್ನು ಜನಜಾನುವಾರುಗಳನ್ನು ವಿವಿಧ ತೆರನಾದ ಹಕ್ಕಿಗಳನ್ನು ನೋಡುವುದು ನನ್ನ ಮುಖ್ಯ ಹವ್ಯಾಸವಾಗಿತ್ತು. ಇದು ಹಗಲು ಹೊತ್ತಿನ ಕೆಲಸವಾಗಿದ್ದರೆ ರಾತ್ರಿಯಾದ ಕೂಡಲೆ ಗೆಳೆಯರನ್ನು ಕಟ್ಟಿಕೊಂಡು ಬಾಳೆಹಣ್ಣು ಕದಿಯುವುದು ನನ್ನ ಮುಖ್ಯ ಕಾಯಕವಾಗಿತ್ತು. ಮದುವೆಮನೆ ಚಪ್ಪರದಲ್ಲಿ ಕರಿಬಾಳೆ ವಾಟುಬಾಳೆ ಪುಟುಬಾಳೆ ರಸಬಾಳೆ ಹಣ್ಣಿನಗೊನೆಗಳನ್ನು ಹಲಸು ಮಾವಿನಸೊಪ್ಪಿನ ಗುಚ್ಚದೊಂದಿಗೆ ನೇತುಬಿಡುತ್ತಿದ್ದರು. ಇದು ಚಪ್ಪರದ ಅಂದಕ್ಕಾಗಿ ನೇತು ಹಾಕುವುದಾಗಿತ್ತು. ಇನ್ನು ಕಾಫಿತಿಂಡಿಗೆ ಊಟಕ್ಕೆ ಬಡಿಸಲು ವಿವಿಧ ತೆರನಾದ ಬಾಳೆಹಣ್ಣುಗಳನ್ನು ಶೇಖರಿಸಲು ಅದಕ್ಕಾಗಿಯೆ ಒಂದು ಪುಟ್ಟ ಸೋಗೆಯನ್ನೋ ಒಣಹುಲ್ಲನ್ನೋ ಹೊದ್ದಿಸಿದ, ಅಡಿಕೆ ಹಾಳೆಯನ್ನು ಗೋಡೆಯಂತೆ ಕಟ್ಟಿದ, ಒಂದು ಪುಟ್ಟ ಗುಡಿಸಲನ್ನು ತತ್ಕಾಲಿಕವಾಗಿ ಕಟ್ಟಿರುತ್ತಿದ್ದರು. ಆ ಗುಡಿಸಲೊಳಗೆ ಬಾಳೆಹಣ್ಣುಗಳ ರಾಶಿಯನ್ನು ಒಟ್ಟಿರುತ್ತಿದ್ದರು. ಯಾರೂ ಬಾಳೆಹಣ್ಣುಗಳನ್ನು ಕದಿಯದಂತೆ ಗುಡಿಸಲಿಗೆ ಒಬ್ಬನನ್ನು ಕಾವಲು ಹಾಕುತ್ತಿದ್ದರು. ಆತನಿಗೆ ಮದುವೆಮನೆ ಮುಗಿಯುವ ತನಕ ಇಲ್ಲದ ಗೌರವ. ದೆಯ್ಯದ ಹರಕೆಯಲ್ಲಿ ಮಾಂಸ ಬಡಿಸುವವನಿಗೆ ಇರುವ ಗೌರವ ಇರುತ್ತಿತ್ತು. ಬಾಳೆಹಣ್ಣಿನ ಗುಡಿಸಲು ಕಾಯುವವನು ಹುಡುಗರನ್ನು ನೋಡಿದರೆ ದೊಣ್ಣೆ ಹಿಡಿದು ಬೆರೆಸಾಡುತ್ತಿದ್ದ. ದೊಡ್ಡವರು ಶ್ರೀಮಂತರನ್ನು ನೋಡಿದರೆ ಅವನ ಧ್ವನಿ ಕುಗ್ಗಿ ಹೋಗಿ ಗಡವ ನಾಯಿಗಳನ್ನು ಕಂಡರೆ ಚಿಕ್ಕನಾಯಿಗಳು ಬಾಲ ಆಡಿಸುತ್ತ ಗಡವ ನಾಯಿಯ ಮುಸುಡಿ ನೆಕ್ಕುತ್ತ ಅಡ್ಡ ಮಲಗಿ ಮೂಸಲು ಅವಕಾಶ ಮಾಡಿ ಕೊಡುವಂತೆ ಅವನು ಆಡುತ್ತಿದ್ದ. ಅದನ್ನು ದುರುಪಯೋಗಿಸಿಕೊಂಡು ಶ್ರೀಮಂತರು ಅವನೊಂದಿಗೆ ರಹಸ್ಯವಾಗಿ ಮಾತನಾಡಿ ಒಂದೆರಡು ಬಾಳೆಹಣ್ಣುಗಳನ್ನು ಗಿಟ್ಟಿಸುತ್ತಿದ್ದರು. ಮುಖ ನೋಡಿ ಮಣೆ ಹಾಕುವ ಪ್ರವೃತ್ತಿ ಚಿಕ್ಕವರಾದ ನಮಗೆ ಬಹಳ ಸಿಟ್ಟನ್ನು ತರುತ್ತಿತ್ತು. ಅಲ್ಲದೆ

ರಾತ್ರಿ ಹೇಗಾದರು ಮಾಡಿ ಗುಡಿಸಲು ಹೊಕ್ಕು ಬಾಳೆ ಹಣ್ಣು ಕದಿಯಲೇಬೇಕೆಂಬ ಹಟವೂ ಬರುತ್ತಿತ್ತು.

ಮದುವೆ ಮನೆಗಳಲ್ಲಿ ಬಾಳೆ ಹಣ್ಣು ಕದ್ದ ರುಚಿಯಿಂದಾಗಿ ನಾನು ಬೇಸಿಗೆ ರಜೆ ಬಂದಿತೆಂದರೆ ನಮ್ಮ ತಂದೆಗೆ ಬರುವ ಮದುವೆ ಆಮಂತ್ರಣ ಪತ್ರಿಕೆಗಳನ್ನು ಬಹಳ ಆಸಕ್ತಿಯಿಂದ ಯಾವ ಹಳ್ಳಿಯಲ್ಲಿ ಮದುವೆ ನಡೆಯುತ್ತಿದೆ ಎಂದು ನೋಡುತ್ತಿದ್ದೆ. ಒಮ್ಮೆ ಭೇಟಿಕೊಟ್ಟ ಹಳ್ಳಿಗಳಾದರೆ ನನಗೆ ಅಲ್ಲಿಗೆ ಹೋಗಲು ಬಹಳ ಖುಷಿ. ಆ ಹಳ್ಳಿಯ ವಿದ್ಯಾಮಾನವೆಲ್ಲ ನನಗೆ ತಿಳಿದಿರುವಂತದ್ದೆ. ಅಲ್ಲಿ ಬಾಳೆಹಣ್ಣಿನ ಗುಡಿಸಲು ಎಲ್ಲಿ ಕಟ್ಟುತ್ತಾರೆ, ಗುಡಿಸಲು ಕಾವಲು ಕಾಯುವವನಾರು, ಅವನು ಬೇಗನೆ ಮಲಗುತ್ತಾನೆಯೆ ಇಲ್ಲ ರಾತ್ರಿಯೆಲ್ಲ ಜಾಗರಣೆ ಮಾಡಿರುತ್ತಾನೆಯೆ ಎಂಬ ಇತ್ಯಾದಿ ವಿಚಾರಗಳು ನನಗೆ ಕರತಲಾಮಲಕವಾಗಿರುತ್ತಿತ್ತು. ಆದ್ದರಿಂದ ಬಾಳೆಹಣ್ಣು ಕದಿಯಲು ಹೆಚ್ಚಿನ ಶ್ರಮ ಪಡಬೇಕೊ ಬೇಡವೊ ಎಂದು ನಾನು ಮದುವೆ ಪತ್ರಿಕೆ ನೋಡಿದ ತಕ್ಷಣ ಗ್ರಹಿಸಿಕೊಳ್ಳುತ್ತಿದ್ದೆ. ನಮ್ಮ ತಂದೆಯವರು ಅದೇಕೋ ಮದುವೆ ಮನೆಗಳಿಗೆ ನಮ್ಮಣ್ಣನನ್ನು ಕಳುಹಿಸದೆ ನನ್ನನ್ನೆ ಕಳುಹಿಸುತ್ತಿದ್ದರು. ನಮ್ಮಣ್ಣನೂ ನಮ್ಮ ತಂದೆಯವರಂತೆ ಯಾವುದೇ ಮದುವೆ ಮನೆಗಳಿಗೆ ಹೋಗುತ್ತಿರಲಿಲ್ಲ. ಅದು ನನಗೆ 'ರೊಟ್ಟಿ ಜಾರಿ ತುಪ್ಪಕ್ಕೆ ಬಿದ್ದಂತಾಗುತ್ತಿತ್ತು.' ನಮ್ಮ ತಂದೆತಾಯಿ ನಮ್ಮಣ್ಣ ತಂಗಿಯರು ಮದುವೆ ಮನೆಯ ಪಾಯಸದ ಊಟ ಮಾಡುವುದು ನನಗಿಷ್ಟವೆಂದು ತಿಳಿದಿದ್ದರು. ಆಗೆಲ್ಲ ಮದುವೆ ಮನೆಗಳಲ್ಲಿ ಈಗಿನಂತೆ ವಿವಿಧ ಭಕ್ಷ್ಯ ಭೋಜ್ಯಗಳಿರುತ್ತಿರಲಿಲ್ಲ. ಒಂದು ಪಾಯಸ ಒಂದು ಸಿಹಿತಿಂಡಿ ಮಾತ್ರ ಹೆಚ್ಚುವರಿ ಭಕ್ಷ್ಯವಿರುತ್ತಿತ್ತು. ಉಳಿದಂತೆ ಅನ್ನ ಗದ್ದೆಸೌತೆಕಾಯಿ (ಬಣ್ಣದ ಸೌತೆಕಾಯಿ) ಸಾರು ಇರುತ್ತಿತ್ತು. ಅದು ಬಿಟ್ಟರೆ ಮಾವಿನ ಕಾಯಿಯ ಉಪ್ಪಿನ ಕಾಯಿ ಮತ್ತು ಹಪ್ಪಳವಷ್ಟೆ. ಈಗಿನಂತೆ ವಿವಿಧ ರೀತಿಯ ಪಲ್ಯಗಳು ಇರುತ್ತಿರಲಿಲ್ಲ. ನಾನು ಮದುವೆ ಮನೆಗೆ ಹೋಗಿ ಬಂದಾಗ ನಮ್ಮ ತಂದೆತಾಯಿ "ಮದುವೆ ಮನೇಲಿ ಏನು ಪಾಯಸ ಮಾಡಿದ್ದರೊ? ಏನು ಸಿಹಿತಿಂಡಿ ಮಾಡಿದ್ದರೊ?" ಎಂದು ಕೇಳುತ್ತಿದ್ದರು. ಅವರು ಹಾಗೆ ಕೇಳುವುದು ನನಗೆ ತಿಳಿದಿದ್ದರಿಂದ ನಾನು ಅವಲಕ್ಕಿ ಪಾಯಸವೆಂದೋ ಅಕ್ಕಿಪಾಯಸವೆಂದೋ ಹಾಗಿಲ್ಲ ಗೋಧಿ ಪಾಯಸವೆಂದೋ ನನ್ನ ಸಿದ್ಧಪಡಿಸಿದ ಉತ್ತರವನ್ನು ಹೇಳುತ್ತಿದ್ದೆ. ಸಿಹಿತಿಂಡಿಗೆ ಉತ್ತರ ಲಾಡು ಎಂದೋ ಕೇಸರಿಬಾತ್ ಎಂದೋ ಹೇಳುತ್ತಿದ್ದೆ. ಬಹಳ ಮದುವೆ ಮನೆಗೆ ತಿರುಗುತ್ತಿದ್ದುದರಿಂದ ಮತ್ತು ಬಾಳೆಹಣ್ಣಿನ ಮೇಲೆ ಕಣ್ಣಿಟ್ಟವನಿಗೆ ಅದೆಲ್ಲ ನೆನಪಿಟ್ಟುಕೊಳ್ಳಲು ವ್ಯವಧಾನವಾದರೂ ಎಲ್ಲಿ ಇರುತ್ತಿತ್ತು? ಆದ್ದರಿಂದ ಏನಾದರೊಂದು ಉತ್ತರ ಹೇಳುತ್ತಿದ್ದೆ.

ಹೀಗೆ ಮದುವೆ ಮನೆಗಳಲ್ಲಿ ನನ್ನ ಬಾಳೆಹಣ್ಣಿನ ಭೇಟೆ ನಡೆಯುತ್ತಿರುವಾಗ ಮರೆಯಲಾಗದ ಘಟನೆಯೊಂದು ನನ್ನ ಜೀವನದಲ್ಲಿ ನಡೆದು ಹೋಯಿತು. ಯಥಾಪ್ರಕಾರ ಬೇಸಿಗೆ ರಜೆಯಲ್ಲಿ ಮದುವೆಗೆ ನಾನು ತಿರುಗುತ್ತಿರುವಾಗ್ಗ ನಮ್ಮೂರಿನ ಒಬ್ಬರ ಮದುವೆಗೆ ಹೋಗುವ ಪ್ರಸಂಗ ನನಗೆ ಒದಗಿ ಬಂದಿತು. ಹೆಣ್ಣಿನ ಮನೆ ಹತ್ತು ಹನ್ನೆರಡು ಮೈಲಿ ದೂರದಲ್ಲಿದ್ದು ಎತ್ತಿನಗಾಡಿಯಲ್ಲಿ ನಾನು ಹೋಗಬೇಕಾಗಿ ಬಂದಿತು. ನಮ್ಮ ತಂದೆಯವರು "ಹೋಗತಿಯನೋ " ಎಂದು ಕೇಳಿದರು. ಹಾಗೇಕೆ ಕೇಳಿದರೆಂದರೆ ಹಿಂದೆ ಮೂರುನಾಲ್ಕು ಮೈಲಿ ದೂರದ ಊರಿಗೆ ದಿಬ್ಬಣದೊಂದಿಗೆ ನೂರಾರು ಜನರೊಂದಿಗೆ ನಾನು ಒಬ್ಬನಾಗಿ ಹೋಗುತ್ತಿದ್ದೆ. ಈಗ ಎತ್ತಿನಗಾಡಿಯಲ್ಲಿ ಕಾಣದ ಊರಿಗೆ ಹೋಗಬೇಕಾದ್ದರಿಂದ ಗಾಡಿಯಲ್ಲಿಕೂರಲು ಜಾಗ ಸಿಗುತ್ತದೆಯೊ ಇಲ್ಲೋ ಎಂಬುದು

ನಮ್ಮ ತಂದೆಯವರ ಅನುಮಾನಕ್ಕೆ ಕಾರಣವಾಗಿತ್ತು. ಅವರು ಕೇಳಿದ ಕೂಡಲೆ ನಾನು "ಗಾಡೀಲಿ ಜಾಗ ಸಿಕ್ಕಿದರೆ ಹೋಗತೀನಿ, ಇಲ್ಲದೆ ಇದ್ದರೆ ವಾಪಸು ಬರತೀನಿ" ಎಂದೆ. ನಮ್ಮ ತಂದೆಯವರು "ಹಾಗೆ ಮಾಡು" ಎಂದರು. ನನ್ನ ಎಣಿಕೆ ಹೆಣ್ಣಿನ ಮನೆಯಲ್ಲಿ ಬಾಳೆಹಣ್ಣು ಕದಿಯಲಿಕ್ಕಾಗದೆ ಇದ್ದರೂ ಗಂಡಿನ ಮನೆಯಲ್ಲಾದರು ಬಾಳೆಹಣ್ಣುಗಳ ಮೇಲೆ ನನ್ನ ಕೈಚಳಕವನ್ನು ಪ್ರಯೋಗಿಸಬಹುದೆಂದು. ಗಂಡಿನ ಅಣ್ಣನ ಮಗ ಧರ್ಮಯ್ಯನು ನನಗೆ ಆಗಲೆ ಭಾರೀ ಬಾಳೆಕಾಯಿಗೊನೆಗಳು ಮದುವೆ ಮನೆಗೆ ಶೇಖರಣೆಯಾಗುತ್ತಿರುವ ಸೂಚನೆಯನ್ನು ಕೊಟ್ಟಿದ್ದ. ಬಾಳೆಹಣ್ಣನ್ನು ಹಾರಿಸುವ ನಮ್ಮ ಗ್ಯಾಂಗಿನಲ್ಲಿ ಅವನೂ ಒಬ್ಬ ಸದಸ್ಯನಾಗಿದ್ದ. ಓದಿನಲ್ಲಿ ನಾವಿಬ್ಬರು ಬಹಳ ಹಿಂದೆ ಇದ್ದರೂ ಮದುವೆ ಮನೆಯಲ್ಲಿ ಬಾಳೆಹಣ್ಣು ಎಗರಿಸುವುದರಲ್ಲಿ ನಾವಿಬ್ಬರು ಬಹಳ ಮುಂದೆ ಇದ್ದೆವು.

ಮದುವೆ ಮಹೂರ್ತ 'ಗೋಧೂಳಿ'ಯ ಸಮಯದಲ್ಲೆಂದು ಬೆಳಿಗ್ಗೆ ಕಾಫಿತಿಂಡಿಯಾದ ಮೇಲೆ ಎತ್ತಿನ ಗಾಡಿಗಳು ಜನಗಳನ್ನು ತುಂಬಿಕೊಂಡು ಹೆಣ್ಣಿನ ಊರಿಗೆ ಹೋಗುವುದೆಂದು ನಮಗೆ ಮೊದಲೇ ತಿಳಿಸಲಾಗಿತ್ತು. ಆದ್ದರಿಂದ ನಾನು ಬೆಳಿಗ್ಗೆ ಎದ್ದವನೆ ಸ್ನಾನ ಕಾಫಿತಿಂಡಿ ಮಾಡಿಕೊಂಡು ಗಂಡಿನ ಮನೆ ಕಡೆಗೆ ಹೊರಟೆ. ನಮ್ಮ ತಂದೆತಾಯಿಯವರು ಹೊಳೆಹಳ್ಳದ ಕಾಡಿನ ಕಡೆಗೆ ಹೋಗಕೂಡದೆಂದು ಕಿವಿಮಾತು ಹೇಳಿದರು. ಅವರ ಕಿವಿಮಾತಿಗೆ ನಾನು ಹೂಂ ಎಂದೆ. ಅವರು ಹೇಳಿದಂತೆ ಕೇಳಲಿಕ್ಕೆ ಆಗುತ್ತದೆಯೇ. ಕಿವಿ ಮಾತು ಕೇಳುವ ವಯಸ್ಸೆ ನನ್ನದು? ಗಂಡಿನ ಮನೆಯಲ್ಲಿ ಸುಮಾರು ಐವತ್ತು ಎತ್ತಿನ ಗಾಡಿಗಳು ಹೊರಡಲು ಸಿದ್ಧವಾಗಿ ನಿಂತಿದ್ದವು. ಬಿಸಿಲು ಮಳೆ ಗಾಡಿಯೊಳಗೆ ಕೂತವರಿಗೆ ತಟ್ಟದಿರಲೆಂದು ಗಾಡಿಗಳಿಗೆ ಕಮಾನು ಕಟ್ಟಲಾಗಿತ್ತು. ಎತ್ತುಗಳಿಗೆ ಗೆಜ್ಜೆ ಗಗ್ರ ಕೋಡುಮಟ್ಟೆ ಕುಂಚ ಕುತ್ತಿಗೆ ಕೋಡುಗಳಿಗೆ ಕಟ್ಟಲಾಗಿತ್ತು. ಎತ್ತುಗಳ ಬೆನ್ನಿಗೆ ಬಣ್ಣದ ಜೂಲ ಹೊದಿಸಲಾಗಿತ್ತು. ಎತ್ತುಗಳು ಅದರಿಂದಾಗಿ ಬಹಳ ಆಕರ್ಷಕವಾಗಿ ಕಾಣುತ್ತಿದ್ದವು. ಕಾಫಿತಿಂಡಿ ಮಾಡಿದ ಗಂಡಸರು ಹೆಂಗಸರು ಹುಡುಗರು ಮಕ್ಕಳು ತಾವು ಯಾವ ಗಾಡಿಯಲ್ಲಿ ಕೂರಬೇಕೊ ಆ ಗಾಡಿಗಳ ಹತ್ತಿರ ನಿಂತಿದ್ದರು. ಮದುವೆ ಮನೆಯಲ್ಲಿ ಬ್ಯಾಂಡು ವಾದ್ಯದ ಗೌಜೇಗೌಜು. ನಾಯಿಗಳಿಗೆ ಅದೇನೆಂದು ಅರ್ಥವಾಗದೆ ಅವು ಕೂಡ ಬ್ಯಾಂಡು ವಾದ್ಯದ ಸದ್ದಿಗೆ ಸ್ಪರ್ಧಿಸುವಂತೆ ಕೂಗುತ್ತಿದ್ದವು. ನಾನು ಧರ್ಮಯ್ಯನನ್ನು ಹುಡುಕಿಕೊಂಡು ಹೋದೆ, ನಾವು ಕೂತು ಪಯಣಿಸುವ ಗಾಡಿ ಯಾವುದೆಂದು ತಿಳಿಯಲು. ಧರ್ಮಯ್ಯ ಊಟದ ಚಪ್ಪರದಡಿ ಗೆಳೆಯರೊಂದಿಗೆ ಕಾಫಿತಿಂಡಿ ಮಾಡುತ್ತ ಹರಟುತ್ತ ಕೂತಿದ್ದ. ನನ್ನನ್ನು ನೋಡಿದ ಹರ್ಷಾತಿರೇಕದಿಂದ "ಕನ್ನೇಶ್ವರದ ರಾಮ ಬಂದ" ಎಂದ. ಅಂದಿನ ಕಾಲದಲ್ಲಿ ಕಳ್ಳತನ ಮಾಡುವವರನ್ನು ಅಡ್ಡ ಹೆಸರಿನಿಂದ 'ಕನ್ನೇಶ್ವರದ ರಾಮ' 'ಸೊರಬದ ಜುಂಜ' 'ತೀರ್ಥಹಳ್ಳಿ ಹೊನ್ನ' ಎಂದು ಕರೆಯುವುದು ವಾಡಿಕೆ ಇತ್ತು. ಆ ಮೂವರು ಇಪ್ಪತ್ತನೆ ಶತಮಾನದ ಆದಿ ಭಾಗದ ಕುಖ್ಯಾತ ಕಳ್ಳರು. ಅವರು ಕಳ್ಳತನ ಮಾಡುತ್ತಿದ್ದರೆ ಹೊರತು ಕೊಲೆಸುಲಿಗೆ ಅತ್ಯಾಚಾರ ಮಾಡುತ್ತಿರಲಿಲ್ಲ. ಆದ್ದರಿಂದ ಕನ್ನೇಶ್ವರದ ರಾಮ ಎಂದು ಧರ್ಮಯ್ಯ ನನ್ನನ್ನು ಕರೆದದ್ದರಿಂದ ನಾನು ಶೌರ್ಯ ಪ್ರಶಸ್ತಿ ಗಿಟ್ಟಿಸಿಕೊಂಡವರಂತೆ ಬೀಗಿದೆ. "ಇದ್ಯಾಕೊ ಇಷ್ಟು ಹೊತ್ತಾಯಿತು ಬರದು" ಎಂದು ಧರ್ಮಯ್ಯ ಕೇಳಿದ. "ಸ್ನಾನ ಕಾಫಿತಿಂಡಿ ಮಾಡಿಕೊಂಡು ಬರೋದು ತಡವಾಯಿತು" ಎಂದುತ್ತರಿಸಿ ಅವನ ಪಕ್ಕದಲ್ಲಿ ಕೂತೆ. ಯಾವ ಗಾಡೀಲಿ ಕೂರೋದು? ಹೆಣ್ಣಿನ ಮನೆಯಲ್ಲಿ

ಬಾಳೆಹಣ್ಣಿನ ಗುಡಿಸಲು ಮದುವೆ ಮನೆಗೆ ಹತ್ತಿರವಿದೆಯೆ? ಎಂದು ಅವನಿಗೆ ಕೇಳಿದೆ. ಅವನು ತನಗು ಆ ಹಳ್ಳಿ ಹೊಸದೆಂದು ಅಲ್ಲಿ ಹೋದಮೇಲೆ ಅವನ್ನೆಲ್ಲ ನೋಡೋಣವೆಂದು ಹೇಳಿದ. ಯಾವುದಾದರೊಂದು ಗಾಡಿಯಲ್ಲಿ ಗೆಳೆಯರು ಕೂತರಾಯಿತೆಂದು ಅವನು ಸಮಾಧಾನ ಮಾಡಿದ. ನನಗು ಒಂದು ಮುಷ್ಟಿ ಅವಲಕ್ಕಿ ಒಂದು ಸೊಟ್ಟ ಕರಿಬಾಳೆಹಣ್ಣು ಕರಿಬಣ್ಣದಕಾಫಿ ಎಂದು ಹೇಳಲಾಗುವ ಪಾನೀಯ ಸಿಕ್ಕಿತು. "ನಿಮ್ಮನೇಲಿ ಬಾಳೆಹಣ್ಣು ಎಲ್ಲಿ ಇಟ್ಟಿದಾರೆ" ಎಂದು ಪಿಸು ಮಾತಿನಲ್ಲಿ ಧರ್ಮಯ್ಯನಿಗೆ ಕೇಳಿದೆ. ಅವನು ಸುತ್ತಮುತ್ತ ನೋಡಿ "ಉಪ್ಪರಿಗೇಲಿ ಕೂಡಿದಾರೆ. ಈಗ ಅಲ್ಲಿ ಹೋಗುವಂತಿಲ್ಲ. ಅಲ್ಲಿ ಹೆಂಗಸರ ಹಿಂಡು ಇದೆ. ಹೆಣ್ಣಿನ ಮನೆಯಿಂದ ಬಂದ ಮೇಲೆ ನೋಡಣ" ಎಂದ.

ಧರ್ಮಯ್ಯನು ಹೇಗೂ ಗಂಡಿನ ಮನೆಯವನಾದ್ದರಿಂದ ಗಾಡಿಯಲ್ಲಿ ಕೂರಲು ಜಾಗ ಸಿಗಲಿಕ್ಕೆ ತೊಂದರೆಯಾಗಲಿಲ್ಲ. ಅವರ ಮನೆ ಗಾಡಿಯಲ್ಲೆ ನಾವು ಹಿಂದೆ ಕೂತೆವು. ಅವರ ಮನೆ ಹೆಂಗಸರು ಸಂಬಂಧಿ ಹೆಂಗಸರ ಮುಂದೆ ಕೂತರು. ಪಿತಾರಿ ಪೆಟ್ಟಿಗೆಯಲ್ಲಿಟ್ಟ ಹೊಸಸೀರೆ ಕುಪ್ಪಸದಲ್ಲಿ ಅವರು ಮಿಂಚುತ್ತಿದ್ದರು. ಅವರಿಗೆ ನಾವು ಲಕ್ಷಕ್ಕಿಲ್ಲದೆ ಅವರು ತಮ್ಮ ಕಷ್ಟಸುಖಗಳನ್ನು ತಮ್ಮ ತಮ್ಮಲ್ಲಿ ಹಂಚಿಕೊಳ್ಳುತ್ತಿದ್ದರು. ಕೆಲವು ಸಾರಿ ಉಕ್ಕಿಬಂದ ದುಃಖವನ್ನು ತಡೆದು ಕೊಳ್ಳಲಾಗದೆ ಕಣ್ಣೀರು ಹಾಕುವುದು ಗಂಟಲಲ್ಲೆ ಮಾತನಾಡುವುದು ಮಾಡುತ್ತಿದ್ದರು. ಅಪರೂಪಕ್ಕೆ ಸೇರಿದ ಮಹಿಳೆಯರ ಮಾತುಗಳು ಮನಕಲಕುವಂತಿರುವಾಗ್ಗ ಮದುವೆ ಗಂಡು ದಂಡಿಗೆಯಲ್ಲಿ ಕೂತು ಆರುಜನ ಕರಿಯ ದಾಂಡಿಗರು ಅವರನ್ನು ಹೊತ್ತು ಹೊರಟರು. ಅವರ ಹಿಂದೆ ಎತ್ತಿನಗಾಡಿಗಳು ಒಂದೊಂದಾಗಿ ಹೊರಟವು. ಬ್ಯಾಂಡು ವಾದ್ಯಗಳು ಭಾರೀ ಸದ್ದು ಮಾಡಿದವು. ಪೇಟೆ ಮುಗಿದ ಮೇಲೆ ಕಗ್ಗಾಡು ಎದುರಾದಾಗ ಬ್ಯಾಂಡು ವಾದ್ಯದ ಸದ್ದು ನಿಂತು ದಂಡಿಗೆ ಹೊತ್ತ ದಾಂಡಿಗರು ದಾರಿಸಾಗಲು "ಅಯ್ಯ ಬಾರ॥ ಅಮ್ಮ ಹಗೂರ॥ ಅಮ್ಮ ಬಾರ॥ ಅಯ್ಯ ಹಗೂರ॥" ಎಂದು ಹೇಳುವುದು ಇನ್ನೊಂದು ಗುಂಪು "ಹೋ ಹೋ" ಎಂದು ಸೊಲ್ಲು ಕೊಡುವುದು ಎದ್ದು ಕೇಳಿತು. ದಂಡಿಗೆಯಲ್ಲಿ ಗಂಡು ಒಬ್ಬನೆ ಕೂರಬಾರದೆಂಬ ನಿಯಮ ಇದ್ದುದರಿಂದ ಚಿಕ್ಕ ಹುಡುಗಿಯೊಬ್ಬಳನ್ನು ಕೂರಿಸಿದ್ದರು. ಆ ಹುಡುಗಿ ಏನು ತೂಕ ಇದ್ದಾಳೆಂದು "ಅಮ್ಮ ಭಾರ" ಎಂದರೊ? ಬಹುಶಃ ಮದುವಣಗಿತ್ತಿಯನ್ನು ಕೂರಿಸುಕೊಂಡು ಬರುವಾಗ ಹೇಳುವುದನ್ನು ಈಗಲೆ ಹೇಳಿದ್ದಿರಬಹುದೆಂದು ಕೊಂಡೆ. ದುರ್ಗಮವಾದ ಕಾಡಿನಲ್ಲಿ ಎತ್ತುಗಳು ಗೆಜ್ಜೆ ಗಗ್ಗರಗಳ ಸದ್ದು ಮಾಡುತ್ತ ಹೋದವು. ಕೆಲವು ಗಾಡಿ ಹೊಡೆಯುವವರು ಎತ್ತುಗಳನ್ನು ಹುರಿದುಂಬಿಸಲು ದೊಡ್ಡ ದನಿಯಲ್ಲಿ ರಾಗವಾಗಿ ಹಾಡುತ್ತಿದ್ದರು. ಎತ್ತುಗಳ ಗೆಜ್ಜೆಯ ಸದ್ದು ಗಾಡಿ ಹೊಡೆಯುವವರ ಹಾಡು ಹಳೆಯದೇನನ್ನೊ ನೆನೆಸುವಂತಿತ್ತು. ನಮ್ಮಂತೆ ಮಹಿಳೆಯರು ಮೌನವಾಗಿ ಎಲ್ಲವನ್ನು ಕೇಳಿಸಿಕೊಳ್ಳುತ್ತಿದ್ದರು.

ಗಾಡಿಗಳು ಮದುಮಗಳ ಹಳ್ಳಿ ಸೇರುವ ಹೊತ್ತಿಗೆ ಮಧ್ಯಾಹ್ನ ಹನ್ನೆರಡು ಘಂಟೆಯಾಗಿರಬಹುದು. ಮದುಮಗನನ್ನು ಎದುರುಗೊಳ್ಳಲು ಮದುವಣಗಿತ್ತಿಯ ಕಡೆ ಮುತ್ತೈದೆ ಮಹಿಳೆಯರು ಹೊಸ ಸೀರೆಯುಟ್ಟು ಸ್ನೋ ಪೌಡರ್ ಬಳಿದುಕೊಂಡು ಜಾಜಿ ಸೇವಂತಿಗೆ ಮಲ್ಲಿಗೆ ಸಂಪಿಗೆ ಹೂಗಳನ್ನು ಮುಡಿದು ಹರಿವಾಣದಲ್ಲಿ ಕಳಸ ಹೂವು ಅರಿಶಿನ ಕುಂಕುಮ ಹಿಡಿದು ವಿಜೃಂಭಿಸುತ್ತ ನಿಂತಿದ್ದರು. ನಮಗೆ ಹುಡುಗರಿಗೆ ಅದೆಲ್ಲ ಏಕೆಂದು ನಾವು ಗಾಡಿಯ ಹಿಂಬದಿಯಲ್ಲಿ ಧುಮುಕಿ ಮದುವೆಮನೆ

ಕಡೆಗೆ ಓಡಿದೆವು. ಮದುವೆ ಮನೆಯಲ್ಲಿ ತುಂಬ ಜನ ಸೇರಿತ್ತು. ನಾನು ಜುಂಜನಿಗೆ (ಧರ್ಮಯ್ಯನಿಗೆ ಆ ಹೆಸರಿನಿಂದ ಕರೆಯುತ್ತಿದ್ದೆವು.) ಚಪ್ಪರದಲ್ಲಿ ಕಟ್ಟಿದ ಬಾಳೆಗೊನೆ ನೋಡಲು ಕಿವಿಮಾತು ಹೇಳಿದೆ. ಸೋಗೆ ಹೊದ್ದಿಸಿದ ಬಾರೀ ಚಪ್ಪರದಲ್ಲಿ ಹಲಸು ಮಾವು ಹೂಗುಚ್ಚಗಳ ನಡುವೆ ಕರಿಬಾಳೆ ಪುಟ್ಟುಬಾಲೆ ಪಾಟುಬಾಳೆ ರಸಬಾಳೆ ಹಣ್ಣಿನ ಗೊನೆಗಳನ್ನು ಅಲ್ಲಲ್ಲಿ ನೇತು ಬಿಟ್ಟಿದ್ದರು. ರಾತ್ರಿ ಜನಗಳೆಲ್ಲ ಮಲಗಿದ ಮೇಲೆ ಬಾಳೆಹಣ್ಣಿನ ಬೇಟೆಯಾಡುವುದೆಂದು ಹವಣಿಕೆ ಹೂಡಿದೆವು. ಬ್ಯಾಂಡು ವಾದ್ಯಗಳ ಗಲಾಟೆಯಲ್ಲಿ ನಮ್ಮ ಮಾತುಗಳು ಯಾರಿಗೂ ಕೇಳಿಸುತ್ತಿರಲಿಲ್ಲ. ಮನೆಯ ಉಪ್ಪರಿಗೆಗಳಲ್ಲಿ ಬಾಳೆಹಣ್ಣುಗಳನ್ನು ಕೂಡಿದ್ದಾರೆಯೆ ಎಂದು ನೋಡಲು ನಮ್ಮ ಪಟಾಲಂ ಉಪ್ಪರಿಗೆಗೆ ಪಯಣಿಸಿತು. ಎಲ್ಲಿ ನೋಡಿದರು ಜನಜಂಗುಳಿ. ವಿಶಾಲವಾದ ಉಪ್ಪರಿಗೆಯಲ್ಲಿ ಜನ ರಾತ್ರಿ ಮಲಗಲು ಗುಡಾರ ಹಾಸಿದ್ದರು. ಅಲ್ಲಿ ಯಾರೂ ಇರಲಿಲ್ಲ. ಆದರೆ ಬಾಳೆಹಣ್ಣಿನ ನಿಶಾನೆ ಇರಲಿಲ್ಲ. ಬಾಳೆಹಣ್ಣು ಶೇಖರಿಸಲು ಹೊರಗಲ್ಲಾದರು ಗುಡಿಸಲು ಕಟ್ಟಿದ್ದಾರೆಯೆ ಎಂದು ಉಪ್ಪರಿಗೆಯಿಂದ ಇಳಿದೆವು. ಮನೆ ಮುಂದೆ ವಿಶಾಲವಾದ ಅಂಗಳದಲ್ಲು ಜನ ಊಟ ಮಾಡಲು ಬಾರೀ ಚಪ್ಪರ ಹಾಕಿದ್ದಿತು. ಅದರಾಚೆ ದನಕರುಗಳ ಕೊಟ್ಟಿಗೆಯು, ಕೊಟ್ಟಗೆಯಾಚೆ ಒಂದು ತಾತ್ಕಾಲಿಕ ಸೋಗೆ ಹೊದ್ದಿಸಿದ ಗುಡಿಸಲು ಕಂಡಿತು. ಅದೇ ಬಾಳೆಹಣ್ಣಿನ ಗುಡಿಸಲಿರಬೇಕೆಂದು ಊಹಿಸಿ ಅತ್ತಕಡೆಗೆ ಹೋದೆವು. ನಮ್ಮ ಊಹೆ ನಿಜವಾಗಿತ್ತು. ಗುಡಿಸಲು ಮುಂಭಾಗದಲ್ಲೊಬ್ಬ ಬೀಡಿ ಸೇದುತ್ತ ಕೂತಿದ್ದ. ಆತ ನಮ್ಮನ್ನು ನೋಡಿ "ಏನು ಬಾಳೆಹಣ್ಣು ಕದೀಲಿಕ್ಕೆ ಬಂದಿದ್ದೀರೇನರೋ?" ಎಂದ. ಬಾಳೆಹಣ್ಣಿನ ಗುಡಿಸಲು ಕಾಯುವುದರಲ್ಲಿ ಅವನು ಹಳಬ ಎಂದು ಅವನ ಮಾತಿನಿಂದ ನಮಗೆ ಅರ್ಥವಾಯಿತು. ನಮ್ಮನ್ನು ಕಳ್ಳರು ಎಂದು ಅವನು ಭಾವಿಸಿದ್ದುದು ನನಗೆ ಬಹಳ ಅವಮಾನವಾಗಿ ಹೋಯಿತು. ಅವನಿಗೆ ಚುರುಕು ಮುಟ್ಟಿಸಲು ಜುಂಜನಿಗೆ ಹೇಳಿದೆ. ಜುಂಜನ ಸ್ವಾಭಿಮಾನ ಕೆರಳಿತ್ತು. ಆತ "ನಾವು ಗಂಡಿನ ಮನೆಯವರು ಹುಶಾರಾಗಿ ಮಾತಾಡು" ಎಂದು ರೋಪು ಹಾಕಿಬಿಟ್ಟ. ಗಂಡಿನ ಮನೆಯವರಿಗೆ ಆಗಲ್ಲ ಅವಮಾನವಾಗುವಂತಹ ಮಾತನಾಡುವಂತಿರಲಿಲ್ಲ. ಹಾಗೇನಾದರು ಮಾತನಾಡಿದರೆ ಅದೇ ಒಂದು ರಾದ್ಧಾಂತವಾಗಿ ಜಗಳ ಹೊಡೆದಾಟವಾಗುತ್ತಿತ್ತು. ಮದುವಣಿಗನೂ ಯಾರವರು/ ಏನಂತೆ/ ಯಾಕಂತೆ? ಎಂದು ರೇಗಿ ತಮ್ಮವರಿಗೆ ಅವಮಾನವಾಗುವುದನ್ನು ಸಹಿಸಲಾರದೆ ರೇಗಿಬಿಡುತ್ತಿದ್ದ. ಇದೆಲ್ಲ ಕಾವಲುಗಾರನಿಗೆ ತಿಳಿದಿದ್ದರಿಂದ ಅವನು ಓಹೊ ಎಂದು ಹಲ್ಲು ಕಿರಿದು ನಕ್ಕ. ಅದರಿಂದ ಜುಂಜನು ಹೆಚ್ಚಿಕೊಂಡು "ನಾನು ಮದುಮಗನ ಅಣ್ಣನ ಮಗ. ಎಚ್ಚರಿಕೆಯಿಂದ ಇರು." ಎಂದು ಮತ್ತೊಂದು ಆವಾಜ್ ಹಾಕಿದ. ನಾನು ಇಬ್ಬರಿಗು ಸಮಾಧಾನ ಮಾಡುವವನಂತೆ "ಹೋಗಲಿ ಬಿಡು. ನಾವು ಗಂಡಿನ ಮನೆಯವರು ಅಂತ ಅವನಿಗೆ ಗೊತ್ತಾಗಲಿಲ್ಲ. ನಿನ್ನ ಹೆಸರೇನೋ?" ಕೇಳಿದೆ. ಅವನು ಸಣ್ಣ ದನಿಯಲ್ಲಿ "ತಮ್ಮಯ್ಯ" ಎಂದ. "ತಮ್ಮಯ್ಯ ಇಲ್ಲಿ ಹೊಳೆಗೆ ದಾರಿ ಯಾವುದೊ" ಎಂದು ಕೇಳಿದೆ, ನಾವು ಹೊಳೆಯ ಕಡೆಗೆ ಹೋಗುವವರೆಂದು ಅವನು ತಿಳಿದುಕೊಳ್ಳಲಿ ಎಂದು. ಅವನು "ಇದೆ ದಾರೀಲಿ ಹೋಗಿ, ಒಂದು ಫರ್ಲಾಂಗ್ ದೂರದಲ್ಲಿ ಹೊಳೆ ಸಿಗತದೆ" ಎಂದು ಒಂದು ಕಾಲುದಾರಿಯನ್ನು ತೋರಿಸಿದ. ನಾವು ಕಾಲುದಾರಿಯಲ್ಲಿ ಪಯಣಿಸಿದೆವು. ತಮ್ಮಯ್ಯನ ಬಾಯಿ ಮುಚ್ಚಿಸಿದುದನ್ನು ನೆನೆಸಿಕೊಂಡು ಹೊಳೆಯ ಕಲ್ಲು ಬಂಡೆಗಳ ಮೇಲೆ ಕೂತು ಯಥೇಚ್ಚವಾಗಿ

ನಕ್ಕೆವು. ಹೊಳೆಯಲ್ಲಿ ತಿಳಿನೀರು ಜುಳು ಜುಳು ಸದ್ದು ಮಾಡಿ ವೇಗವಾಗಿ ಹರಿಯುತ್ತಿತ್ತು. ಹೊಳೆಯಲ್ಲಿನ ಕಲ್ಲುಬಂಡೆಗಳು ಬಿಸಿಲಿಗೆ ಒಣಗಿ ಮಳೆಯಲ್ಲಿ ನೆನೆದು ಕಪ್ಪಾಗಿದ್ದವು. ಹೊಳೆಯಾಚೆಗೆ ಕಾಡು ಸಮೃದ್ಧವಾಗಿ ಬೆಳೆದಿದ್ದಿತು. ಯಾವ ಯಾವುದೋ ಹಕ್ಕಿಗಳು ಹಾರಾಡುತ್ತಿದ್ದವು. ಆ ಪ್ರದೇಶವೆ ಬಹಳ ಸುಂದರವಾಗಿದ್ದಿತು. ಮದುವೆ ಮನೆಯಲ್ಲಿ ಬ್ಯಾಂಡು ವಾದ್ಯದ ಗೌಜು ಸಣ್ಣದಾಗಿ ಕೇಳಿಸುತ್ತಲಿತ್ತು. ನಾವು ರಾತ್ರಿ ಜನಗಳೆಲ್ಲ ಮಲಗಿದ ಮೇಲೆ ಬಾಳೆಹಣ್ಣು ಕದಿಯಲು ವ್ಯೂಹ ರಚಿಸಿದೆವು. ರಾತ್ರಿ ಚಪ್ಪರದಡಿ ಜನಗಳು  ಮಲಗಿಲ್ಲದೆ ಯಾರಾದರು ಹರಟೆ ಹೊಡೆಯುತ್ತಿದ್ದರೆ ಚಪ್ಪರದ ಬಾಳೆಹಣ್ಣಿನ ಬೇಟೆಯನ್ನು ಬಿಟ್ಟು ಬಾಳೆಹಣ್ಣು ಶೇಖರಣೆಯಾದ ಗುಡಿಸಲಿಗೆ ಧಾಳಿ ಇಡುವುದೆಂದು ತಮ್ಮಯ್ಯನು ನಿದ್ದೆ ಮಾಡುವ ತನಕ ದೂರದಲ್ಲಿ ಕೂತು  ಕಾಯುವುದೆಂದು ತೀರ್ಮಾನಿಸಿದೆವು. ಗೆಳೆಯರುಗಳಲ್ಲಿ ನಾನು ದೇಹ ಪ್ರಕೃತಿಯಲ್ಲಿ ಚಿಕ್ಕವನಾದ್ದರಿಂದ ಗುಡಿಸಲೊಳಕ್ಕೆ ನುಗ್ಗಿ ಬಾಳೆಹಣ್ಣು ಕದ್ದು ಹೊರಗೆ ನಿಂತವರಿಗೆ ತಂದುಕೊಡುವುದೆಂದು ತೀರ್ಮಾನವಾಯಿತು. ಹಿಂದೆಲ್ಲ ನಾನೆ ಆ ಕೆಲಸ ಮಾಡುತ್ತಿದ್ದುದರಿಂದ ನಾನು ಒಪ್ಪಿಕೊಳ್ಳಬೇಕಾಯಿತು.

ಅನಂತರ ಮದುವೆ ಮನೆ ಕಡೆಗೆ ಧಾಪಿಸಿದೆವು. ಚಪ್ಪರದಡಿ ಜನ ಕೂತು ಊಟ ಮಾಡುತ್ತಿದ್ದರು. ಬಡಿಸುವವರು ಬಹಳ ಬಿರುಸಾಗಿ ಅತ್ತಿಂದಿತ್ತ ಪಾತ್ರೆ ಪರಟೆ ಹಿಡಿದು ಓಡಿಯಾಡುತ್ತಿದ್ದರು. ಹಿರಿಯ ಗೌಡರುಗಳು ಕಚ್ಚೆ ಎತ್ತಿ ಹಿಡಿದುಕೊಂಡು ಗೌಡಿಕೆಯಿಂದ ದೊಡ್ಡದನಿಯಲ್ಲಿ ಬಡಿಸುವವರಿಗೆ ನಿರ್ದೇಶನ ಕೊಡುತ್ತಿದ್ದರು. ಮದುವೆ ಮನೆಗೆಂದು ಅವರು ಬಂದು ಆಗಲೆ ನಾಲ್ಕಾರು ದಿನಗಳಾಗಿತ್ತು. ಅವರನ್ನು ನೋಡಿದರೆ ಆಳುಕಾಳುಗಳಿಗೆ  ಹೆಂಗಸರು ಮಕ್ಕಳಿಗೆ ಭಯ. ಅಂತಹ ದರ್ಪ ಅವರದು. ಈಗಾಗಲೆ ಒಂದಷ್ಟು ಜನ ಊಟ ಮಾಡಿದ್ದಿರಬೇಕು. ಚಪ್ಪರದಾಚೆ ಉಂಡೆಸೆದ ಬಾಳೆ ಎಲೆ ನೆಕ್ಕಲು ನಾಯಿಗಳು ಹೋರಾಟ ಮಾಡುತ್ತಿದ್ದವು. ನಮ್ಮೊಂದಿಗೆ ಗಾಡಿಯ ಹಿಂದೆ ಬಂದ ನಮ್ಮೂರಿನ ನಾಯಿಗಳಿಗೆ ಗಂಡಿನ ಮನೆಯವರೆಂಬ ಪ್ರತಿಷ್ಠೆಯ ಪ್ರಶ್ನೆ. ಹೆಣ್ಣಿನ ಮನೆಯಲ್ಲಿ ಅಕ್ಕಪಕ್ಕದ ಮನೆಯಲ್ಲಿ ಹುಟ್ಟಿ ಬೆಳೆದ ನಾಯಿಗಳಿಗೆ ನಮ್ಮೂರಿಗೆ ಬಂದು ನಮಗೇ ರೋಫು ಹಾಕುತ್ತಾರಲ್ಲ ಎಂಬ ಒಣ ಪ್ರತಿಷ್ಠೆ. ನಮ್ಮ ನಾಯಿಗಳನ್ನು ಹೆಣ್ಣಿನ ಮನೆ ನಾಯಿಗಳು ಮುರಿಯುತ್ತಾವಲ್ಲ  ಎಂದು ನಮಗು ಒಂದು ತರಹೆಯ ಅಸೂಯೆ. ನಾವು ಹುಡುಗರು ಓಡಿ ಹೋಗಿ ನಮ್ಮ ನಾಯಿಗಳ ಪರವಾಗಿ "ಛೂ ಹಿಡಿ ಹಿಡಿ" ಎಂದು ನಮ್ಮ ನಾಯಿಗಳನ್ನು ಪ್ರೋತ್ಸಾಹಿಸಿ ಹೆಣ್ಣಿನ ಮನೆ ನಾಯಿಗಳನ್ನ ಬಡಿದೆವು. ಮೊದಮೊದಲು ಜೋರಾಗಿ ಹೋರಾಡಿದ ಅವು ಸತ್ತೆವೊ ಕೆಟ್ಟೆವೊ ಎಂದು ಬಾಲಮುದುಡಿಕೊಂಡು ತೋಟದ ಕಡೆಗೆ ಓಡಿದವು. ಹೆಣ್ಣಿನ ಮನೆಯ ದೊಡ್ಡವರ್‍ಯಾರಾದರು ನೋಡಿದ್ದರೆ ನಮಗೆ ಏಟು ಬೀಳುತ್ತಿತ್ತು. ನಮ್ಮ ನಾಯಿಗಳು ಓಡಿಹೋದ ನಾಯಿಗಳನ್ನು ಅಟ್ಟಿಕೊಂಡು ಹೋಗಿ ತೋಟದಲ್ಲಿ ದಾಂಧಲೆ ಹೆಚ್ಚಿಸಿದವು. ಮೂರನೆ ಹಂತಿಯಲ್ಲಿ ಕೂತು ನಾವು ಊಟ ಮಾಡಿದೆವು. ಮದುವೆಮನೆ ಊಟ ಎಂದು ಅವಲಕ್ಕಿ ಪಾಯಸ ಸಿಹಿಬೂಂದಿ ಮಾಡಿದ್ದರು.

ಊಟವಾದ ಮೇಲೆ ನಾವು ರಾತ್ರಿ ಬಾಳೆಹಣ್ಣಿನ ಬೇಟೆಗೆಂದು ಮತ್ತೊಂದು ಸುತ್ತು ಬಾಳೆಹಣ್ಣಿನ ಗುಡಿಸಲ ಕಡೆಗೆ ಹೋದೆವು. ಈ ಸಾರಿ ತಮ್ಮಯ್ಯನ ಕಣ್ಣಿಗೆ ಬೀಳದಂತೆ ಗುಡಿಸಲು ಮುಂದೆ ಹೋಗದೆ ಹಿಂದೆ ಹೋದೆವು. ರಾತ್ರಿ ಗುಡಿಸಲಿಗೆ ಗೋಡೆಯಂತೆ ಕಟ್ಟಿದ ಅಡಿಕೆಹಾಳೆಗಳನ್ನು ಸರಿಸಿ ಎಲ್ಲಿ ಒಳಕ್ಕೆ ನುಸುಳಬಹುದೆಂದು ಸ್ಥಳವನ್ನು ಪರಿಶೀಲಿಸಿದೆವು. ತಮ್ಮಯ್ಯ ಯಾರೋ ಹಿರಿಯರಿಗೆ

ಬಾಳೆಹಣ್ಣನ್ನು ಕದ್ದು ಕೊಡುತ್ತಿದ್ದ. ಅವರಿಗೆ ಬಾಳೆಹಣ್ಣುಗಳನ್ನು ಏಕೆ ಕೊಟ್ಟೆ ಎಂದು ನಾವು ಕೇಳಲು ಹೋಗಲಿಲ್ಲ. ರಾತ್ರಿ ಅದರ ಜಿದ್ದು ತೀರಿಸಿಕೊಳ್ಳಲು ಪಣತೊಟ್ಟು ಮದುವೆ ಮನೆಗೆ ಹಿಂದಿರುಗಿದೆವು. ಸಂಜೆಯ ತನಕ ಕಾಲ ಕಳೆಯುವುದು ನಮಗೆ ಬಹಳ ಕಷ್ಟವಾಯಿತು. ದೊಡ್ಡವರು ತೋಟಗದ್ದೆ ಆಳುಕಾಳುಗಳನ್ನು ಕುರಿತು ಮಾತನಾಡುತ್ತಿದ್ದರು. ಮದುವೆಯಾಗಬೇಕಾದ ತರುಣರು ಮದುವೆಯಾಗದ ತರುಣಿಯರನ್ನ ನೋಡಲು ಹೆಂಗಸರ ಗುಂಪಿನ ಕಡೆಗೆ ಕಣ್ಣು ಹಾಯಿಸುತ್ತ ಠಳಾಯಿಸುತ್ತಿದ್ದರು. ನಮಗೆ ಅವೆಲ್ಲ ಗೌಣವಾದ್ದರಿಂದ ನಾವು ಗಾಡಿ ಎತ್ತುಗಳನ್ನು ನೋಡಲು ಹೋದೆವು. ನಮ್ಮ ವಯಸ್ಸಿಗೆ ಅದು ತಾನೆ ಮುಖ್ಯವಾದದ್ದು? ನಮ್ಮೂರಿನಿಂದ ಬಂದ ಗಾಡಿಗಳನ್ನು ಸಾಲಾಗಿ ನಿಲ್ಲಿಸಲಾಗಿತ್ತು. ನಾನಾ ರೀತಿಯ ಬಣ್ಣದ ಎತ್ತುಗಳು ಹುರುಳಿ ತಿನ್ನುತ್ತಲೋ ಬಿಳಿಹುಲ್ಲು ತಿನ್ನುತ್ತಲೋ ಇದ್ದವು. ಗಾಡಿ ಹೊಡೆಯುವವರು ಬೀಡಿ ಸೇದುತ್ತ ಹರಟೆ ಹೊಡೆಯುತ್ತಿದ್ದರು. ಅವರವರ ಅಂತಸ್ತು ಜಾತಿಮತ ಪಂಥಕ್ಕನುಗುಣವಾದ ಮಾತುಗಳು. ಯಾವ ಗಾಡಿ ಎತ್ತುಗಳು ನೋಡಲು ಅಂದವಾಗಿವೆ, ಯಾವ ಎತ್ತುಗಳಿಗೆ ಶೃಂಗಾರ ಮಾಡಿದ್ದಾರೆ ಎಂದು ವಿಮರ್ಶಿಸಿ ಮತ್ತೆ ಮದುವೆ ಮನೆಗೆ ಹೋದೆವು. ಮಧ್ಯಾಹ್ನದ ಕಾಫಿತಿಂಡಿಯೂ ಆಯಿತು. ಒಂದು ಮುಷ್ಟಿ ಅವಲಕ್ಕಿ ಒಂದು ಪುಟುಬಾಳೆ ಹಣ್ಣು ಮತ್ತು ಹಾಲು ಕಾಣದ ಒಣ ಕಾಫಿಯು ನಮಗೆ ಸಿಕ್ಕಿತು.

ಸೂರ್ಯ ಮುಳುಗುತ್ತಿದ್ದಂತೆ ಧಾರೆ ಮುಹೂರ್ತ ನಡೆಯುವ ಭರಾಟೆ ಜೋರಾಗಿ ನಡೆಯ ಹತ್ತಿತು. ಜೋಯಿಸರು ಮಂತ್ರ ಹೇಳುವುದು ಮಹಿಳೆಯರು ಸೆಕೆಯಿಂದ 'ಉಸ್‌ಉಸ್' ಎಂದು ನರಳುತ್ತ ಮುಖದ ಮೇಲೆ ಗಾಳಿಬೀಸಿ ಕೊಳ್ಳುವುದು ನಡೆಯಿತು. ಬ್ಯಾಂಡುವಾದ್ಯದವರು ಗಲಾಟೆ ಮಾಡುತ್ತಲೆ ಇದ್ದರು. ಧಾರೆ ಮುಗಿದು ಜನಗಳನ್ನು ಊಟಕ್ಕೆಬ್ಬಿಸಲು ಜನಗಳು ಅತ್ತ ಓಡಿದರು. ನಾವು ಊಟಕ್ಕೆ ಹೋಗದೆ ಚಪ್ಪರದಡಿ ಬಾಳೆಗೊನೆ ನೋಡುತ್ತ ಅತ್ತಿತ್ತ ಸುತ್ತಾಡಿದೆವು. ಚಪ್ಪರದ ಬಾಳೆಹಣ್ಣುಗಳನ್ನು ಎಗರಿಸುವುದು ಕಷ್ಟವಾಗಿ ಕಂಡಿತು. ಮದುವೆಗೆ ಬಂದವರಿಗೆ ಮಲಗಲು ಗುಡಾರ- ಜಮಖಾನ ಹಾಸುತ್ತಿದ್ದರು. ಎರಡನೆ ಹಂತಿಗೆ ಹೋಗಿ ನಾವೂ ಊಟ ಮಾಡಿದೆವು. ಮೊದಲನೆ ಹಂತಿಯಲ್ಲಿ ಊಟ ಮಾಡಿದವರು ಆಮೇಲೆ ಜಾಗ ಸಿಗುವುದಿಲ್ಲವೇನೋ ಎಂದು ಚಪ್ಪರದಡಿ ಮಲಗೇಬಿಟ್ಟರು. ಊಟ ಮಾಡಿದ ನಾವು ಮಲಗಿದಂತೆ ಸ್ವಲ್ಪ ಹೊತ್ತು ನಟಿಸಿ ಆಮೇಲೆ ಹೊರಕಡೆಗೆ ಹೋಗುವವರಂತೆ ಹೊರಗೆ ಹೋಗಿ ಕತ್ತಲಲ್ಲಿ ನಮ್ಮ ಕಾರ್ಯಾಚರಣೆ ಬಗ್ಗೆ ಪಿಸು ದನಿಯಲ್ಲಿ ಮಾತನಾಡುತ್ತ ಕೂತೆವು. ಈ ಹೊತ್ತಿಗೆ ಮದುವೆ ಮನೆಯಲ್ಲಿ ಗ್ಯಾಸು ಲೈಟು ಉರಿಯುತ್ತಿತ್ತೆ ಹೊರತು ಜನಗಳ ಸದ್ದುಗದ್ದಲವಿಲ್ಲದೆ ಮದುವೆ ಮನೆ ಬಿಕೋ ಎನ್ನಹತ್ತಿತು. ಇಡೀ ಹಳ್ಳಿಯಲ್ಲಿ ನಿಶ್ಶಬ್ದ ವಾತಾವರಣ ಹಬ್ಬಿತ್ತು. ಹಳ್ಳಿ ಎಂದರೆ ಜನ ತಿಳಿಯುಮಂತೆ ಹತ್ತಾರು ಮನೆಗಳಿರಲಿಲ್ಲ. ಇದ್ದದ್ದೆ ಮೂರು ಮನೆಗಳು. ಮಲೆನಾಡಿನ ಹಳ್ಳಿಗಳು. ಇರುವ ಮನೆಗಳೆ ಅಷ್ಟು. ಒಂದೊಂದೆ ಮನೆ ಇರುವ ಹಳ್ಳಿಗಳು ಇಲ್ಲದಿಲ್ಲ. ಗದ್ದೆ ತೋಟ ಇರುವಲ್ಲಿ ಜನ ಮನೆ ಕಟ್ಟಿಕೊಂಡು ವಾಸಮಾಡುತ್ತಿದ್ದರು.

ಮದುವೆ ಮನೆಯಲ್ಲಿ ಗೋಡೆಯ ಮೇಲೆ ನೇತು ಹಾಕಿದ ಹಳೆಕಾಲದ ಗಡಿಯಾರ 'ಢಣ್‌ಢಣ್' ಎಂದು ಹತ್ತು ಹೊಡೆಯಿತು. ಚಪ್ಪರದಡಿಯ ವಾತಾವರಣ ಹೇಗಿದೆ ನೋಡೋಣ ಎಂದು ನಾನು ಅತ್ತ ಹೋದೆ. ನಾನಾ ತೆರನಾದ ಗೊರಕೆಗಳೊಂದಿಗೆ ಸಾವಿರಾರು ಜನ ಸುಖನಿದ್ದೆಯಲ್ಲಿದ್ದರು.

ಮನೆಯೊಳಗೆಲ್ಲೊ ಹೆಂಗಸರುಗಳು ಗುಸುಗುಸು ಮಾತನಾಡುತ್ತಿದ್ದರು. ಅಪೂರ್ವಕ್ಕೆ ಸೇರಿದ ಮಹಿಳೆಯರು ಇನ್ನು ಸದ್ಯಕ್ಕೆ ತಾವು ಭೇಟಿಯಾಗುವುದಿಲ್ಲವೆಂದು ಮಾತುಕತೆಯಲ್ಲಿ ತೊಡಗಿದ್ದರು. ಅನಕ್ಷರಸ್ಥರಾದ ಮಹಿಳೆಯರು ಮದುವೆಯಲ್ಲಿ ಭೇಟಿಯಾಗುವುದಿತ್ತೆ ಹೊರತು ಉಳಿದಂತೆ ಭೇಟಿಗೆ ಅವರಿಗೆ ಅವಕಾಶ ಇಲ್ಲದ ಕಾಲವದು. ಆದ್ದರಿಂದ ಸಿಕ್ಕ ಅವಕಾಶವನ್ನು ಅವರು ಬಿಟ್ಟಾರೆಯೆ?

ಚಪ್ಪರದಡಿ ಮನೆಯವರು ಯಾರೋ ಗಂಡಸರು ಅಮಲಿನಲ್ಲಿ ಚಪ್ಪರದ ಕಂಬಕ್ಕೆ ವಾಲಿಕೊಂಡು ಕೂತು ಮಾತನಾಡುತ್ತಿದ್ದರು. ಚಪ್ಪರದ ಬಾಳೆಹಣ್ಣುಗಳನ್ನು ಕದಿಯುವುದು ಅವರೆದುರಿಗೆ ಕಷ್ಟವೆಂದು ಗೆಳೆಯರನ್ನು ಕಟ್ಟಿಕೊಂಡು ಬಾಳೆಹಣ್ಣಿನ ಗುಡಿಸಲ ಕಡೆಗೆ ನಡೆದೆ. ಮರಗಿಡಗಳು ಕಾಣದಂತೆ ಎಲ್ಲೆಲ್ಲೂ ಕತ್ತಲು ಆವರಿಸಿತ್ತು. ತಡವರಿಸಿಕೊಂಡು ಗುಡಿಸಲು ಸಮೀಪ ಹೋದರೆ ತಮ್ಮಯ್ಯನು ಗೊರಕೆ ಹೊಡೆಯುತ್ತಿದ್ದ. ಬಹಳ ಹೊತ್ತು ನಿಂತು ಅವನನ್ನು ನೋಡಿದಾಗ ಅವನ ಪಕ್ಕದಲ್ಲಿ ಬ್ಯಾಟರಿಯು ಒಂದು ದೊಣ್ಣೆಯು ಇದ್ದುದು ಕಂಡಿತು. ನಿಧಾನವಾಗಿ ಕೊಂಚವು ಸದ್ದಾಗದಂತೆ ದೊಣ್ಣೆ ಬ್ಯಾಟರಿ ಎರಡನ್ನೂ ಎಗರಿಸಿದೆ. ಏಕೆಂದರೆ ನಾವು ಬಾಳೆಹಣ್ಣು ಕದಿಯುವಾಗ ಅವನಿಗೆ ಎಚ್ಚರವಾಗಿ ಬ್ಯಾಟರಿ ದೊಣ್ಣೆಯ ಸಹಾಯದಿಂದ ಆತ ನಮ್ಮನ್ನು ಬೇಟೆಯಾಡಬಾರದೆಂದು. ನನ್ನ ಪ್ರಥಮ ಸಾಹಸವನ್ನು ನೋಡಿ ಜುಂಜ ನನ್ನನ್ನು ಶ್ಲಾಘಿಸಿದ. ಕತ್ತಲೆಯಲ್ಲಿ ನಾವು ನಗುತ್ತ ಗುಡಿಸಲು ಹಿಂದೆ ಹೋದೆವು. ಈಗ ನಮ್ಮ ಕೈಯಲ್ಲಿ ಬ್ಯಾಟರಿ ಇದ್ದುದರಿಂದ ನಾವು ತಡವರಿಸಿ ನಡೆಯಬೇಕಾದ್ದಿರಲಿಲ್ಲ. ಆದರೆ ಹಾಳೆಯ ಗೋಡೆಗಳನ್ನು ಎಲ್ಲಿ ಸರಿಸಿ ಒಳಕ್ಕೆ ನುಸುಳಬಹುದೆಂದು ಪರಿಶೀಲಿಸಿ ಪಿಸುದನಿಯಲ್ಲಿ "ಅಲ್ಲಿ ಬ್ಯಾಡ ಇಲ್ಲಿ". "ಇಲ್ಲಿ ಬ್ಯಾಡ ಅಲ್ಲಿ" ಎಂದು ಸಣ್ಣ ಕಿಂಡಿ ಬಟ್ಟಲ್ಲಿ ಜುಂಜನು ಒಂದು ಕಡೆ ಅಡಿಕೆ ಹಾಳೆಯನ್ನು ನಿಧಾನವಾಗಿ ಒತ್ತರಿಸಿದ. ಬಿಸಿಲಲ್ಲಿ ಒಣಗಿದ ಅಡಿಕೆ ಹಾಳೆ ಎಷ್ಟೇ ನಿಧಾನವಾಗಿ ಸರಿಸಿದರೂ 'ಲಟ್ ಲಟ್' ಎಂದು ಸದ್ದು ಮಾಡಿತು. ಸದ್ದಾದ್ದರಿಂದ ನಾವು ಸ್ವಲ್ಪ ಹಿಂಜರಿದು ತಮ್ಮಯ್ಯನಿಗೆ ಎಚ್ಚರವಾಗ ಬಹುದೇನೊ ಎಂದು ಅಡಿಕೆ ಹಾಳೆಯನ್ನು ಇನ್ನೂ ಅಗಲ ಮಾಡುವುದನ್ನು ನಿಲ್ಲಿಸಿ ಕಾದೆವು. ತಮ್ಮಯ್ಯ ಗೊರಕೆ ಹೊಡೆಯುತ್ತಲೆ ಇದ್ದ. ಜುಂಜ ನಾನು ಒಳ ನುಸುಳುವಷ್ಟು ದೊಡ್ಡದು ಮಾಡಲು ಹಾಳೆಯನ್ನು ಸ್ವಲ್ಪ ಜೋರಾಗಿಯೆ ಸರಿಸಿದೆ. ಹಾಳೆ ಮತ್ತಷ್ಟು ಸದ್ದು ಮಾಡಿತು. ಆಗಲೂ ತಮ್ಮಯ್ಯನಿಗೆ ಎಚ್ಚರವಾಗಲಿಲ್ಲ. "ಈಗ ನೀನು ಒಳಗೆ ನುಗ್ಗು. ಕಿಂಡಿ ನೀನು ಒಳಗೆ ಹೋಗುವಷ್ಟು ದೊಡ್ಡದಾಗಿದೆ" ಜುಂಜ ಎಂದ. ನಾನು ಬ್ಯಾಟರಿ ಬೆಳಕು ಬಿಟ್ಟು ಒಳಗೆ ನೋಡಿದೆ. ಬಾಳೆಹಣ್ಣಿನ ರಾಶಿಯೋ ರಾಶಿ. ಕೆಳಗೆ ಹುಲ್ಲಿನ ಮೇಲೆ ಒಂದಷ್ಟು ಇದ್ದರೆ, ಮೇಲೆ ಒಂದಷ್ಟು ಗೊನೆಗಳನ್ನು ನೇತುಹಾಕಿದ್ದರು. ಬ್ಯಾಟರಿಯನ್ನು ಒಳಗಿಟ್ಟು ನಿಧಾನವಾಗಿ ತಲೆ ತೂರಿಸಿ ದೇಹವನ್ನು ಒಳಗೆ ದೂಡುವಾಗ ಹಿಂದಿನಿಂದ ಜುಂಜನು ಗೆಳೆಯರು ನನ್ನನ್ನು ದೂಡಿದರು. ದೂಡುವ ಭರಾಟೆಯಲ್ಲಿ ನನ್ನ ಸೊಂಟ ಅಡಿಕೆ ಹಾಳೆಗೆ ತಗುಲಿ ಜೋರಾಗಿಯೆ ಸದ್ದಾಯಿತು. ಇದೀಗ ತಮ್ಮಯ್ಯನಿಗೆ ಎಚ್ಚರವಾಗಿ "ಯಾರೊ ಅದು" ಎಂದು ಕೂಗಿದ. ಗೆಳೆಯರು ಕತ್ತಲೆಯಲ್ಲಿ ಎದ್ದುಬಿದ್ದು ಓಡಿದರು. ಅವರು ಓಡಿದ ಸದ್ದು ತಮ್ಮಯ್ಯನಿಗೆ ಕೇಳಿಸಿ ಬಿಟ್ಟಿತು. ಅವನು ಬ್ಯಾಟರಿ ದೊಣ್ಣೆಗಾಗಿ ತಡಕಾಡಿದನೆಂದು ತೋರುತ್ತದೆ. "ಬ್ಯಾಟರಿ ದೊಣ್ಣೆ ಏನಾಯಿತಪ್ಪ" ಎಂದು ಅವನು ಅಂದದ್ದು ಕೇಳಿಸಿತು. ನಾನು ಮರೆಯಲ್ಲಿ ನಿಂತೆ. ಭಯದಿಂದ ನಾನು ತತ್ತರಿಸಿ ಹೋದೆ. ಅವನ ಕೈಗೆ ಸಿಕ್ಕಿ ಹಾಕಿಕೊಂಡರೆ ಗತಿ ಏನೆಂದು ನಡುಗ ಹತ್ತಿದೆ. ಇದೊಂದು ಸಾರಿ ಬಚಾವ್

ಆದರೆ ಇನ್ನು ಈ ಕೆಲಸಕ್ಕೆ ಇಳಿಯಬಾರದೆಂದುಕೊಂಡೆ. ಅಷ್ಟರಲ್ಲಿ ತಮ್ಮಯ್ಯ ಗುಡಿಸಲು ಸುತ್ತ ತಿರುಗುತ್ತ ಬಂದ ಸದ್ದಾಯಿತು. ಅವನ ಕೈಯಲ್ಲಿ ಬ್ಯಾಟರಿ ಇಲ್ಲದ್ದರಿಂದ ಅಡಿಕೆ ಹಾಳೆ ಗೋಡೆಯನ್ನು ತಡವುತ್ತ, ನಮ್ಮ ತಂದೆತಾಯಿಗಳನ್ನು ಅಶ್ಲೀಲವಾಗಿ ಬೈಯುತ್ತ ಒಂದು ಸುತ್ತು ತಿರುಗಿದ. ಕಿಂಡಿ ಇದ್ದದ್ದು ಒಂದು ಕಡೆ. ಅವನು ತಡವುತ್ತಿದ್ದುದು ಇನ್ನೊಂದು ಕಡೆ. ಹಾಗಾಗಿ ನಮ್ಮ ಕನಕನ ಕಿಂಡಿ ಅವನಿಗೆ ಸಿಗಲಿಲ್ಲ. ಅವನು ಮಲಗಿದ ಜಾಗಕ್ಕೆ ತಿರುಗಿ ಹೋಗಿ ಕಾಣೆಯಾದ ಬ್ಯಾಟರಿ ದೊಣ್ಣೆಗಾಗಿ ಸ್ವಗತದಲ್ಲಿ ಮಾತನಾಡುತ್ತಿದ್ದ. ಕೊನೆಗೆ ಅವನ ಸದ್ದಿಲ್ಲವಾಯಿತು. ನಾನು ಬ್ಯಾಟರಿ ಬೆಳಕು ಚೆಲ್ಲದೆ ಕತ್ತಲೆಯಲ್ಲಿ ತಡವುತ್ತ ಕೈಗೆ ಸಿಕ್ಕಿದ ಬಾಳೆಹಣ್ಣನ್ನು ಸ್ವಾಹಾ ಮಾಡಹತ್ತಿದೆ. ಕಳಿತ ಬಾಳೆಹಣ್ಣು ಏನು ರುಚಿ ಏನು ಸ್ವಾದ? ಕದ್ದು ಭೋಗಿಸುವುದು ಯಾವಾಗಲು ರುಚಿಯೆ.

ಸ್ವಲ್ಪ ಹೊತ್ತಿನ ಮೇಲೆ ಕಿಂಡಿಯಲ್ಲಿ ಜೋರಾಗಿ ಸದ್ದಾಯಿತು. ಗೆಳೆಯರು ಬಂದರೆಂದು ತಿಳಿದು ಒಂದೆರಡು ಚಿಪ್ಪು ಬಾಳೆಹಣ್ಣನ್ನು ಸಾಗಿಸಲು ಕಿಂಡಿಯಲ್ಲಿ ತೂರಿದೆ. ಬಾಳೆಹಣ್ಣನ್ನು ಅವರು ರಭಸದಿಂದ ಎಳೆದುಕೊಂಡರು. ಇನ್ನು ಕೊಡುವವನಿದ್ದೆ. ಅದೇಕೊ ಅವರು ಜೋರಾಗಿ ಉಸಿರಾಡುತ್ತಿದ್ದರು. ಅನುಮಾನಬಂದು ಬೆಳಕು ಬಿಟ್ಟು ನೋಡಿದೆ. ನೋಡಿದರೆ ಎಮ್ಮೆಯೊಂದು ಬಾಳೆಹಣ್ಣನ್ನು ಮುಕ್ಕುತ್ತಿತ್ತು. ನಾನು ಬಾಳೆಹಣ್ಣು ಕೊಟ್ಟಿದ್ದು ಎಮ್ಮೆಗೆ. ಕಿಂಡಿಯಿಂದ ಬಾಳೆಹಣ್ಣಿನ ಪರಿಮಳ ಬಂದು ಎಮ್ಮೆ ಕಿಂಡಿಗೆ ಮುಸುಡಿ ಹಾಕಿ ಸದ್ದಾಗಿತ್ತು. ಈಗ ಮತ್ತೊಮ್ಮೆ ತಮ್ಮಯ್ಯ ಕೂಗಿ ಎದ್ದು ಬಂದ. ಅವನು ಬರದೆ ಹೋಗಿದ್ದರೆ ಎಮ್ಮೆ ಕಿಂಡಿ ದೊಡ್ಡದು ಮಾಡಿ ಒಳಗೆ ದಾಟುತ್ತಿತ್ತು. ಇಲ್ಲವಾದಲ್ಲಿ ಅದರ ಗಲಾಟೆ ತಡೆಯಲು ನಾನು ಬಾಳೆಹಣ್ಣು ಕೊಡುತ್ತಲೆ ಇರಬೇಕಿತ್ತು. ತಮ್ಮಯ್ಯ ಬಂದದ್ದರಿಂದ ಎಮ್ಮೆ ಓಡಿ ಹೋಯಿತು. ಗೋಡೆಯನ್ನು ತಿವಿದು ಸದ್ದು ಮಾಡಿದ್ದು ಎಮ್ಮೆಯೆ ಎಂದು ಅವನು ತಿಳಿದು ಅದನ್ನು ದೂರ ಓಡಿಸಿ ಹೋಗಿ ಮಲಗಿದ. ಬಾಳೆಹಣ್ಣನ್ನು ಸ್ವಾಹಾ ಮಾಡುವ ನನ್ನ ಕಾರ್ಯ ನಿರಾತಂಕವಾಗಿ ನಡೆಯಿತು. ಗೆಳೆಯರು ಬರಲೇ ಇಲ್ಲ. ಸಾಕಷ್ಟು ಹಣ್ಣು ತಿಂದು ಹೊಟ್ಟೆ ಭರ್ತಿಯಾದ ಮೇಲೆ ಗೆಳೆಯರಿಗಾಗಿ ಕಾಯುತ್ತ ಕೂತೆ. ಬಾಳೆಹಣ್ಣಿನ ಕಂಪು ಗುಡಿಸಲೊಳಗೆ ವ್ಯಾಪಕವಾಗಿ ಹಬ್ಬಿತ್ತು. ಗೆಳೆಯರಿಗಾಗಿ ಕಾಯುತ್ತ ಕೂತಿದ್ದಂತೆ ನನಗೆ ನಿದ್ದೆ ಹತ್ತಿತು. ಒಳ್ಳೆಯ ನಿದ್ದೆ ಮಾಡಿದೆ ಎಂದು ಕಾಣುತ್ತದೆ. ಬೆಳಗಿನ ಜಾವದಲ್ಲಿ ಮದುವೆ ಮನೆಯ ಬ್ಯಾಂಡು ವಾದ್ಯದ ಸದ್ದು ನನ್ನನ್ನು ಎಚ್ಚರಿಸಿತು. ಕಣ್ಣು ಬಿಟ್ಟು ನೋಡಿದರೆ ಬೆಳಕು ಮೂಡುತ್ತಿತ್ತು. ನಾನು ಕೊಟ್ಟ ಬಾಳೆಹಣ್ಣಿನ ರುಚಿಯಿಂದಾಗಿ ಎಮ್ಮೆ ತಿರುಗಿ ಬಂದು ಕಿಂಡಿಯಲ್ಲಿ ನುಗ್ಗಿ ಬಾಳೆಹಣ್ಣುಗಳ ಮೇಲೆ ದಾಳಿ ಮಾಡಿತ್ತು. ಇನ್ನು ಅಲ್ಲಿ ಕುಳಿತರೆ ಅಪಾಯವೆಂದು ಸಟ್ಟನೆದ್ದು ಮತ್ತಷ್ಟು ಬಾಳೆಹಣ್ಣುಗಳನ್ನು ಜೋಬಿಗೆ ತುರುಕಿಕೊಂಡು ಕಿಂಡಿಯಲ್ಲಿ ಹಾರಿ ಹೊರಬಿದ್ದೆ. ಹೊಳೆಗೆ ಹೋಗಿ ನಿತ್ಯಕರ್ಮವನ್ನು ಮುಗಿಸಿಕೊಂಡು ಹೊಳೆ ನೀರಿನಲ್ಲಿ ಏಳುವ ಆವಿಯನ್ನು ನೋಡುತ್ತ ನಿಂತೆ. ಹೊಳೆಯ ನೀರನ್ನು ಕಾಯಿಸಿದವರಾರು? ನೀರು ಬೆಚ್ಚಗಿರಲು ಕಾರಣವೇನು? ಎಂಬ ಪ್ರಶ್ನೆ ನನ್ನ ಮನದಲ್ಲೆದ್ದಿತು. ಬೆಳಗಿನ ಹೊತ್ತು ನಿಶ್ಯಬ್ದ ವಾತಾವರಣದ ಹೊಳೆಯನ್ನು ನೋಡಲು ಚೆಂದ. ಅಷ್ಟರಲ್ಲಿ ಮದುವೆ ಮನೆಯಿಂದ ಜನಗಳು ಹೊಳೆಯ ಕಡೆಗೆ ತಂಡೋಪತಂಡವಾಗಿ ಬರುತ್ತಿದ್ದರು. ಅವರಲ್ಲಿ ಯಾರೋ "ಈ ಹುಡುಗ ಏನು ಇಷ್ಟು ಹೊತಾರೆ ಮುಂಚೆ ಬಂದಿದಾನೆ" ಎಂದರು. ನಾನು ನಾಚಿಕೊಂಡು ಹಿಂದಿರುಗುವಾಗ್ಗೆ ಸಂಪೂರ್ಣ ಬೆಳಗಾಗಿತ್ತು. ಬಾಳೆ ಹಣ್ಣಿನ ಗುಡಿಸಲಲ್ಲಿ ಜನ ಸೇರಿದ್ದರು. ಎಮ್ಮೆ

ಗುಡಿಸಲೊಳಗೆ ಹೊಕ್ಕಿದ್ದು, ಬ್ಯಾಟರಿ ದೊಣ್ಣೆ ಗುಡಿಸಲಲ್ಲಿ ಸಿಕ್ಕಿದ ಬಗ್ಗೆ ಚರ್ಚೆಯಾಗುತ್ತಿತ್ತು. ಜುಂಜನು ಗೆಳೆಯರು ಅಲ್ಲಿನಿಂತು ನೋಡುತ್ತಿದ್ದರು. ನನ್ನನ್ನು ನೋಡಿದವರೆ ಅವರು ನನ್ನ ಬಳಿಗೆ ಓಡಿಬಂದರು. ರಾತ್ರಿ ಏನು ನಡೆಯಿತು ಹೇಗೆ ತಪ್ಪಿಸಿಕೊಂಡೆ ಎಂದು ಅವರು ಕೇಳಿದರು. ಎಲ್ಲಾ ವಿದ್ಯಮಾನವನ್ನು ಅವರಿಗೆ ವಿವರಿಸಿದೆ. ಅವರು ನನ್ನನ್ನು ಬಿಟ್ಟು ಹೋದುದಕ್ಕೆ ಆಕ್ಷೇಪಿಸಿದೆ. ಅವರು ಮತ್ತೆ ಗುಡಿಸಲಬಳಿ ಬರುವಾಸ ಹೊತ್ತು ಮದುವೆ ಮನೆಗೆ ಹೋಗಿ ಮಲಗಿದವರಿಗೆ ಎಚ್ಚರವೆ ಆಗಲಿಲ್ಲವೆಂದು ಹೇಳಿದರು. ಅವರನ್ನು ಕಾಡಿನ ಕಡೆಗೆ ಕರೆದುಕೊಂಡು ಹೋಗಿ ಚಡ್ಡಿ ಜೇಬಿನಲ್ಲಿದ್ದ ಬಾಳೆಹಣ್ಣು ಕೊಟ್ಟೆ. ಅವರು ಹಣ್ಣು ತಿನ್ನುತ್ತ ನಾನು ಮೋಸ ಹೋಗಿ ಗೆಳೆಯರೆಂದು ತಿಳಿದು ಎಮ್ಮೆಗೆ ಬಾಳೆಹಣ್ಣು ತಿನ್ನಿಸಿದ್ದನ್ನು, ನಾನು ನಿದ್ದೆ ಮಾಡಿದ್ದುದನ್ನು, ತಮ್ಮಯ್ಯ ಬ್ಯಾಟರಿ ದೊಣ್ಣೆ ಇಲ್ಲದೆ ಅಡಕೆ ಹಾಳೆಯ ಗೋಡೆಯನ್ನು ತಡಪಿದ್ದನ್ನು ನೆನೆಸಿಕೊಂಡು ನಕ್ಕರು. ●

ಬಿಳುಮನೆ ರಾಮದಾಸ್, ೧೪೦೧, ೩೭ನೇ 'ಬಿ' ತಿರುವು, ೧೧ನೇ ಮುಖ್ಯರಸ್ತೆ
ಜಯನಗರ ೪ನೇ ಟಿ ಬ್ಲಾಕ್, ಬೆಂಗಳೂರು - ೫೬೦ ೦೪೧

# ಸರಸ್ವತಿ ಸಮ್ಮಾನ-ಪುರಸ್ಕೃತ ಮರಾಠೀ ನಾಟಕಕಾರ ಮಹೇಶ ಎಲಕುಂಚವಾರ

ಡಾ. ಅಮೃತ್ ರಾ. ಯಾರ್ದಿ

ಮರಾಠಿ ಸಾಹಿತ್ಯಕ್ಕೆ -ಅದರಲ್ಲೂ ನಾಟಕ ಸಾಹಿತ್ಯಕ್ಕೆ- ತನ್ನದೇ ಆದ ಒಂದು ಸಮೃದ್ಧ ಪರಂಪರೆ ಇದೆ. ಈ ಪರಂಪರೆಯಲ್ಲಿ ಅನೇಕ ನಾಟಕಕಾರರು ತಮ್ಮ ಪಾಲಿನ ಸೇವೆಯನ್ನು ಅತ್ಯಂತ ಶ್ರದ್ಧೆಯಿಂದ, ನಿಷ್ಠೆಯಿಂದ ಸಲ್ಲಿಸಿದ್ದಾರೆ. ಈ ಪರಂಪರೆಯಲ್ಲಿ ತಮ್ಮದೇ ಆದ ಹೆಜ್ಜೆಯ ಗುರುತು ಹಾಕಿ ಕೊಟ್ಟವರಲ್ಲಿ ಶ್ರೀ ಮಹೇಶ ಎಲಕುಂಚವಾರರವರು ಒಬ್ಬರು. ಈ ವರ್ಷದ ಸರಸ್ವತಿ ಸಮ್ಮಾನದಿಂದ ಸತ್ಕರಿಸಲ್ಪಟ್ಟ ಎಲಕುಂಚವಾರರವರು ಸ್ವತಂತ್ರ ಶೈಲಿಯ ಅಂತಾರಾಷ್ಟ್ರೀಯ ಖ್ಯಾತಿಯ ಮರಾಠೀ ನಾಟಕಕಾರರು.

ಸದ್ಯಕ್ಕೆ ನಾಗಪೂರದಲ್ಲಿ ವಾಸ್ತವ್ಯ ಮಾಡಿಕೊಂಡಿರುವ ಇವರು ತಮ್ಮ ಇಂಗ್ಲೀಷ್ ಎಂ.ಎ. ನಾಗಪುರ ವಿಶ್ವವಿದ್ಯಾಲಯದಿಂದ ೧೯೬೩ ರಲ್ಲಿ ಮುಗಿಸಿದರು. ಅದೇ ವಿಶ್ವವಿದ್ಯಾಲಯದಿಂದ ೧೯೭೦ರಲ್ಲಿ 'ಪ್ರಾಚೀನ ಭಾರತದ ಇತಿಹಾಸ'ದಲ್ಲಿ ಮತ್ತೊಂದು ಎಂ.ಎ. ಪದವಿಯನ್ನು ಪಡೆದುಕೊಂಡರು. ಕಳೆದ ೩೫ ವರ್ಷಗಳಿಂದ ಅವರು ಮರಾಠೀ ಸಾಹಿತ್ಯ ಮತ್ತು ರಂಗಭೂಮಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಅವರು ಬರೆದ ಪ್ರತಿಯೊಂದು ನಾಟಕವೂ ಒಂದು ಹೊಸ ಪ್ರಯೋಗವಾಗಿರುತ್ತದೆ.

೧೯೬೭ರಲ್ಲಿ ಅವರು ಬರೆದ 'ರುದ್ರವರ್ಷ' ನಾಟಕದಿಂದ ಅವರು ರಂಗರಸಿಕರನ್ನು ತಮ್ಮ ಕಡೆಗೆ ಆಕರ್ಷಿಸಿಕೊಂಡರು. ವಾಸ್ತವಜೀವನ ಮತ್ತು ದೈವದ ನಿಷ್ಠುರತೆ, ಈ ಎರಡು ಮಟ್ಟಗಳಲ್ಲಿ ನಡೆಯುವ ಈ ನಾಟಕದಲ್ಲಿನ ಎಲ್ಲ ಪಾತ್ರಗಳು ಒಂದು ರೀತಿಯಲ್ಲಿ ಶಾಪಗ್ರಸ್ತ ಪಾತ್ರಗಳು. ಅವರ ಆಂತರಿಕ ಸಂಘರ್ಷ ಮತ್ತು ಉದ್ಧ್ವಸ್ತಗೊಳ್ಳುತ್ತಿರುವ ಬದುಕು ಇವುಗಳ ಪರಿಣಾಮಕಾರಿ ಚಿತ್ರಣ ಇದರಲ್ಲಿ ಮಾಡಲಾಗಿದೆ. ಕೆಲವರ ಅಭಿಪ್ರಾಯದಲ್ಲಿ ಈ ನಾಟಕವು ಮೆಲೋಡ್ರಾಮಾ ಮತ್ತು ಸೇಡಿನ ನಾಟ್ಯ. ಆದರೂ ಅದರಲ್ಲಿನ ಉತ್ಕಟವಾದ ಸಂವಾದಗಳು ಮತ್ತು ಭಾವದರ್ಶನದಿಂದ ಎಲಕುಂಚವಾರರವರ ಪ್ರತಿಭೆಯು ಗಮನ ಸೆಳೆಯಿತು. ೧೯೭೩ರಲ್ಲಿ ಪ್ರಕಟಗೊಂಡ 'ಗಾರ್ಬೊ' ನಾಟಕದಲ್ಲಿನ ಲೈಂಗಿಕತೆ ಮತ್ತು ಹಿಂಸೆ, ಗ್ರಾಮ್ಯ ಭಾಷೆ ಮತ್ತು ಕ್ರೂರತೆ ಇವುಗಳ ಕಾರಣದಿಂದ

ಈ ನಾಟಕವು ಬಹುಚರ್ಚಿತವಾಯಿತು. ಸಭ್ಯತೆಯ ಮುಖವಾಡಗಳನ್ನು ಬದಿಗಿಟ್ಟು ಮನುಷ್ಯನ ಆದಿಮ ಪ್ರೇರಣೆಗಳ ವಾಸ್ತವ ದರ್ಶನ ನೀಡುವ, ಶ್ಲೀಲ-ಅಶ್ಲೀಲ, ನೈತಿಕ-ಅನೈತಿಕ ಇವುಗಳಲ್ಲಿನ ವ್ಯತ್ಯಾಸಗಳ ಬಗ್ಗೆ ಮಡಿವಂತಿಕೆ ತೋರಿಸದೆ ಇರುವುದರಿಂದ ಮರಾಠೀ ನಾಟಕಕ್ಷೇತ್ರದಲ್ಲಿ ಮಹೇಶ ಎಲಕುಂಚವಾರರವರ ಸ್ಥಾನ ನಿಶ್ಚಿತವಾಯಿತು. ೧೯೭೪ರಲ್ಲಿ ಅವರು ಬರೆದ 'ವಾಸನಾಕಾಂಡ' ರಂಗಭೂಮಿಯ ಮೇಲೆ ಬಂತು. ಆದರೆ, ಸೆನ್ಸಾರ್ ಬೋರ್ಡಿನವರು ಅದನ್ನು ಆಕ್ಷೇಪಿಸಿದರು. ಈ ನಾಟಕದಲ್ಲಿ ಅಣ್ಣ-ತಂಗಿಯರಲ್ಲಿರುವ ಅನೈಸರ್ಗಿಕ ಸಂಬಂಧದ ಚಿತ್ರಣ ಇದೆ. ಕಲಾವಂತನ ಕಲಾನಿರ್ಮಿತಿಯ ಸಂದರ್ಭದಲ್ಲಿನ ಕಾಮವಾಸನೆ ಮತ್ತು ಸ್ತ್ರೀ ಪ್ರಕೃತಿಯ ಶುದ್ಧ ಕಾಮವಾಸನೆ ಇವುಗಳಲ್ಲಿನ ವ್ಯತ್ಯಾಸವನ್ನು ಸ್ಪಷ್ಟಪಡಿಸುತ್ತಿರುವಾಗ, ಈ ಪ್ರಮತ್ತ ಕಾಮವಾಸನೆಯನ್ನು ದಾಟಿ ಒಂದು ರೀತಿಯ ಆಧ್ಯಾತ್ಮಿಕತೆ ಕೂಡ ಇದರಲ್ಲಿ ಕಾಣಬಹುದು. ಒಂದು ವೈಚಾರಿಕ ಶಿಲ್ಪ, ಒಂದು ಭೌಮಿತಿಯ ಪ್ರಮೇಯ, ಪ್ರತೀಕಾತ್ಮಕವಾದ ನಾಟ್ಯಾಶಯ ಈ ರೀತಿಯ ಹಲವಾರು ದೃಷ್ಟಿಗಳಿಂದ ಸಮೀಕ್ಷಕರು ಈ ನಾಟಕವನ್ನು ಪ್ರಶಂಸಿಸಿದ್ದಾರೆ. ೧೯೮೧ರಲ್ಲಿ ಎಲಕುಂಚವಾರರವರು ಬರೆದ 'ಪಾರ್ಟಿ' ಎಂಬ ನಾಟಕ ಕೂಡ ಇದೇ ರೀತಿಯ ವಿವಾದಾಸ್ಪದ ವಿಷಯವನ್ನು ಹುಟ್ಟುಹಾಕಿತು.

೧೯೮೭ರಲ್ಲಿ ಪ್ರಕಟಗೊಂಡ ನಾಟಕ 'ವಾಡಾ ಚಿರೇಬಂದಿ'; (ಇದು ಕನ್ನಡಕ್ಕೆ ಭಾಷಾಂತರಗೊಂಡಿದೆ). ಈ ನಾಟಕದ ವಿಷಯ ಈ ಮೊದಲು ಬರೆದಿರುವ ನಾಟಕಗಳಿಗಿಂತ ಭಿನ್ನವಾದದ್ದು. ಇಲ್ಲಿಯವರೆಗೆ ಬದುಕಿನ ಕ್ರೂರತೆ, ಹಿಂಸೆ, ಲೈಂಗಿಕತೆ ಇವುಗಳ ಬಗ್ಗೆ ಬರೆದಿರುವ ಎಲಕುಂಚವಾರರವರು ಈ ನಾಟಕದಲ್ಲಿ ಇನಾಮುದಾರರು, ಅವರಲ್ಲಿನ ಅವಿಭಕ್ತ ಕುಟುಂಬ ಪದ್ಧತಿ, ಸಂಕ್ರಮಣಾವಸ್ಥೆಯಲ್ಲಿರುವ ಬಳಗದವರ ಸಂಬಂಧಗಳು, ಅವರಲ್ಲಿರುವ ಮಾನಸಿಕ ಒತ್ತಡಗಳು ಇವುಗಳ ಬಗ್ಗೆ ಚರ್ಚೆ ಮಾಡಿದ್ದಾರೆ. ಈ ವಾಡೆ ಅಂದರೆ ಮಾತಾಡುವ, ಜೀವಂತವಾಗಿರುವ, ಗತಿಮಾನತೆ ಹೊಂದಿರುವ ಇತಿಹಾಸವೆ ಆಗಿದೆ ಮತ್ತು ವಾಸ್ತುಪುರುಷ ಆಗಿರುವುದರಿಂದ ಈ ವಾಡೆಯೆ ಈ ನಾಟಕದ ನಾಯಕ ಪಾತ್ರವಾಗಿದೆ. ದೇಶಪಾಂಡೆ ಮನೆತನದ ಕಲ್ಪಪುರುಷವಾಗಿದೆ. ಎಲ್ಲರೂ ಈ ವಾಡೆಯ ಎದುರು ನತಮಸ್ತಕರಾಗುತ್ತಾರೆ. ತಮ್ಮ ಇಡೀ ಅಸ್ತಿತ್ವವನ್ನು ಈ ಕುಲಪುರುಷನಲ್ಲಿ ವಿಲೀನಗೊಳಿಸಿ ತಮ್ಮ ಬದುಕನ್ನು ನಡೆಸುತ್ತಿರುತ್ತಾರೆ. ಈ ನಾಟಕದಿಂದ ಮಹೇಶ ಎಲಕುಂಚವಾರರವರ ಜನಪ್ರಿಯತೆ ಶಿಖರಕ್ಕೇರಿತು. ೧೯೮೯ರಲ್ಲಿ ಸಂಗೀತ ನಾಟಕ ಅಕಾದೆಮಿಯವರು ಉತ್ಕೃಷ್ಟ ನಾಟಕಕಾರರೆಂದು ಅವರನ್ನು ಗೌರವಿಸಿದರು. ಮುಂದೆ ಈ ನಾಟಕದ ಜೊತೆ 'ಮಗ್ನ ತಳ್ಯಾಕಾಠಿ' ಮತ್ತು 'ಯುಗಾಂತ' ಈ ನಾಟಕಗಳನ್ನು ಬರೆದು ನಾಟಕತ್ರಯ ಪೂರ್ತಿಗೊಳಿಸಿದರು. ಈ ಮೂರು ನಾಟಕಗಳನ್ನು ನಾಟ್ಯತ್ರಯಿ (Triology) ಎಂದೇ ಕರೆಯುತ್ತಾರೆ. 'ಯುಗಾಂತ' ನಾಟಕಕ್ಕೆ ಈ ವರ್ಷದ ಸಾಹಿತ್ಯ ಅಕಾದೆಮಿಯ ಪುರಸ್ಕಾರ ಸಿಕ್ಕಿದೆ. ಅಷ್ಟೆ ಅಲ್ಲ, ಐದು ಲಕ್ಷ ರೂಪಾಯಿಗಳ ಸರಸ್ವತಿ ಸಮ್ಮಾನದಿಂದ ಇವರು ಗೌರವಿಸಲ್ಪಟ್ಟಿದ್ದಾರೆ. ಇವರು ೧೯೮೯ರಲ್ಲಿ ಬರೆದ 'ಆತ್ಮಕಥಾ' ನಾಟಕ ಕೂಡ ಜನಮನ ಸೆಳೆಯಿತು.

ಮಹೇಶ ಎಲಕುಂಚವಾರರವರು ಕಳೆದ ೨೪ ವರ್ಷಗಳಿಂದ ಮರಾಠೀ ರಂಗಭೂಮಿಯ ಸೇವೆಯನ್ನು ನಿಷ್ಠೆಯಿಂದ ಮಾಡುತ್ತಾ ಬಂದಿದ್ದಾರೆ. ಇಂಗ್ಲೀಷ್ ವಿಷಯದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ ಇವರಿಗೆ ೬೩ ನೇ ವಯಸ್ಸಿನಲ್ಲಿ ಸರಸ್ವತಿ ಸಮ್ಮಾನ ಲಭಿಸಿತು.

ಒಟ್ಟಿನಲ್ಲಿ ೧೮ ನಾಟಕಗಳನ್ನು ಬರೆದಿರುವ ಎಲಕುಂಚವಾರರವರ ಇನ್ನೊಂದು ವೈಶಿಷ್ಟವೆಂದರೆ ಇವರ ಆರು ನಾಟಕಗಳು ಹಿಂದಿಯಲ್ಲಿ, ನಾಲ್ಕು ನಾಟಕಗಳು ಬಂಗಾಳಿಯಲ್ಲಿ ಮತ್ತು ಮೂರು ನಾಟಕಗಳು ಇಂಗ್ಲೀಷಿನಲ್ಲಿ ಪ್ರದರ್ಶಿಸಲ್ಪಟ್ಟಿವೆ.'ಯುಗಾಂತ' ನಾಟಕತ್ರಯವು ೧೯೯೯ರಲ್ಲಿ ಜರ್ಮನ್‌ಗೆ ಭಾಷಾಂತರಗೊಂಡಿದೆ.

ನಾಟಕಕಾರರಷ್ಟೆ ಅಲ್ಲದೆ, ಉತ್ತಮ ನಟರಾಗಿಯೂ ಎಲಕುಂಚವಾರರವರು ಖ್ಯಾತಿಯನ್ನು ಪಡೆದಿದ್ದಾರೆ. 'ಆಕ್ರೋಶ್' ಎಂಬ ಹಿಂದೀ ಚಿತ್ರ ಮತ್ತು 'ವಾಸ್ತುಪುರುಷ' ಎಂಬ ಮರಾಠೀ ಚಿತ್ರದಲ್ಲಿ ಇವರು ಅಭಿನಯಿಸಿದ್ದಾರೆ.

ಹಲವಾರು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಇವರು ಸಂಪನ್ಮೂಲ ವ್ಯಕ್ತಿಯಾಗಿ ಮಾರ್ಗದರ್ಶನ ನೀಡಿದ್ದಾರೆ. ಜರ್ಮನಿ ಮತ್ತು ರಷಿಯನ್ ರಂಗಭೂಮಿಯೊಂದಿಗೆ ಭಾರತೀಯ ರಂಗಭೂಮಿಯ ತುಲನಾತ್ಮಕ ಅಧ್ಯಯನ ಕೂಡ ಇವರು ಮಾಡಿದ್ದಾರೆ. ಎಲಕುಂಚವಾರರು ೧೯೭೭-೭೮ ರಲ್ಲಿ ಹೋಮಿ ಭಾಭಾ ಫೆಲೋಶಿಪ್, ೧೯೮೯ರಲ್ಲಿ ಸಂಗೀತ ನಾಟಕ ಅಕಾದೆಮಿ ಪುರಸ್ಕಾರ, ೧೯೯೦ರಲ್ಲಿ ಮಹಾರಾಷ್ಟ್ರ ಗೌರವ ಪುರಸ್ಕಾರ, ೧೯೯೩-೯೪ರಲ್ಲಿ ಅಖಿಲ ಭಾರತೀಯ ನಾಟ್ಯ ಪರಿಷತ್ತಿನ ಪುರಸ್ಕಾರ, ೧೯೯೮ರಲ್ಲಿ ಜೀವನವ್ರತೀ ಪುರಸ್ಕಾರ, ೨೦೦೨ರಲ್ಲಿ ಸಾಹಿತ್ಯ ಅಕಾದಮಿಯ ಪುರಸ್ಕಾರ ಮತ್ತು ಅದೇ ವರ್ಷದ ಸರಸ್ವತಿ ಸಮ್ಮಾನಕ್ಕೆ ಪಾತ್ರರಾಗಿದ್ದಾರೆ. ಇಷ್ಟೆಲ್ಲ ಸಾಧನೆ ಮಾಡಿದ್ದರೂ ಇನ್ನೂ ಹೊಸ ಹೆಜ್ಜೆಗಳನ್ನು ಮೂಡಿಸುವ ಛಲವನ್ನು ಹೊಂದಿದ ಮಹೇಶ ಎಲಕುಂಚವಾರರವರು ಮುಂದೆಯೂ ಭಾರತೀಯ ರಂಗಭೂಮಿಗೆ ಮಹತ್ವದ ಕೊಡುಗೆಯನ್ನು ನೀಡಲಿದ್ದಾರೆ. ●

---

ಡಾ. ಅಮೃತ್ ರಾ. ಯಾರ್ದಿ, 'ಜ್ಞಾನದೀಪ; ೨ನೇ ಕ್ರಾಸ್, ಯು.ಬಿ. ಹಿಲ್, ಧಾರವಾಡ ೫೮೦೦೦೧.

# ಎಲ್. ಎನ್. ಮುಕುಂದರಾಜ್‌ರ ಆರು ಕವಿತೆಗಳು

## ದಾರಿಯುದ್ದಕ್ಕೂ

ಎರಡು ಕಣ್ಣುಗಳನ್ನೂ ಬಗೆದು ಕೈಲಿಡಿದು ನಡೆಯುತ್ತಿದ್ದೆ
ದಾರಿಯುದ್ದಕ್ಕೂ....
ಬೆಳ್ಳಂಬೆಳಕು ಕತ್ತಲೆಂಬುದು ಅರಿವಿಗೇ
ಬಾರದಂಥ ಮಿಂಚು
ದಾರಿಯುದ್ದಕ್ಕೂ
ಪುಟ್ಟ ಮಕ್ಕಳು ನನ್ನ
ಕಣ್ಣುಗಳನ್ನು ದ್ರಾಕ್ಷಿಗಳೆಂದೇ ಬಗೆದು
ಗಬಕ್ಕನೆ ಗುಳುಮಿಸಲು ಹಾರಿಬರುತ್ತಿದ್ದವು...
ದಾರಿಯುದ್ದಕ್ಕೂ
ಬಾಯಿಗೆ ಬೆಲ್ಟು ಬಿಗಿದಿದ್ದ ನಾಯಿ ಮಕ್ಕಳನ್ನು ಹೆದರಿಸಲು
ಬೌ.... ಬೌ... ಬೊಗಳುತ್ತಿತ್ತು
ನಾಯಿಗೆ ನನ್ನ ಕಣ್ಣುಗಳ ಬಗ್ಗೆ ಕರುಣೆ
ಪುಟ್ಟ ಮಕ್ಕಳಿಗೆ ದಟ್ಟ ಆಸೆ
ದಾರಿಯುದ್ದಕ್ಕೂ
ಬುದ್ಧಿಗೇಡಿಗಳ ಬಗ್ಗೆ ಭೀತಗೊಂಡೆ
ಬುದ್ಧಿಗೇಡಿಗಳು ಸಿದ್ಧಗೇಡಿಗಳು ಏನನ್ನಾದರೂ
ಕಸಿಯಬಹುದು; ಮಕ್ಕಳಿಗೆ ಯಾಕೆ ಇಂಥ
ಆಸೆ; ಅದೂ ನನ್ನ ಕಣ್ಣುಗಳ ಬಗ್ಗೆ!

ಕಣ್ಣುಗಳು ಇರಬೇಕಾದ ಜಾಗದಲ್ಲಿದ್ದಿದ್ದರೆ ಮಕ್ಕಳ
ಹಂಬಲ? ಕಣ್ಣುಗಳು ಕೈಯಲ್ಲಿದ್ದವು

ದಾರಿಯುದ್ದಕ್ಕೂ
ಅದೇ ನೋಟ ಕೆಲವರು ತಮ್ಮ ಕಾಲುಗಳನ್ನು
ತಲೆಯಮೇಲೆ ಕೊಂಬುಗಳಂತಿಟ್ಟುಕೊಂಡು
ನಡೆಯುತ್ತಿದ್ದರು ಮತ್ತೆ ಕೆಲವರು ತಮ್ಮ
ಕೈಗಳನ್ನು ಬೆನ್ನಿಗೆ ಜೋಡು ಜಡೆಯಂತೆ
ಜೋತುಬಿಟ್ಟುಕೊಂಡಿದ್ದರು ಕೆಲವರು
ತೊಡೆಯ ಸಂದುಗಳಲ್ಲಿ ಟಾರ್ಚುಗಳಂತೆ ತಮ್ಮ
ಮೂಗುಗಳನ್ನಿಟ್ಟುಕೊಂಡು ನಡೆಯುತ್ತಿದ್ದರು
ದಾರಿಯುದ್ದಕ್ಕೂ
ಮೂಗನ್ನಿಟ್ಟುಕೊಂಡವರು ಜಗತ್ತನ್ನೇ
ಮೂಸುವಂತೆ ತಮ್ಮ ಜಿಪ್ಪುಗಳನ್ನು
ಬಿಚ್ಚಿ ನಿಂತಿದ್ದರು; ಅವರನ್ನು ಕಂಡು
ನನ್ನ ನಾಯಿ ನಾಚಿಕೆಯಿಂದ
ತಲೆತಗ್ಗಿಸಿತು. ಸಧ್ಯ! ಅಲ್ಲಿ ಹೆಂಗಸರಿರಲಿಲ್ಲ
ನಾನು ಮಾತ್ರ ಕಣ್ಣುಗಳನ್ನು
ಕೈಲಿಡಿದು ನಡೆಯುತ್ತಲೇ ಇದ್ದೆ
ದಾರಿಯುದ್ದಕ್ಕೂ
ಮಕ್ಕಳು ನನ್ನ ಬೆನ್ನ ಬೇತಾಳಗಳಂತಿದ್ದರು!

## ಎದೆಯ ಏರಿಳಿತಗಳಲ್ಲಿ ಬುದ್ಧನೆಂಬ ಸುಖಪುರುಷ

ನಾನೆಂಬುದಿದ್ದಲ್ಲಿ; ನನ್ನ
ಕವಿತೆಯೆಂಬ ಆತ್ಮವೊಂದಿದ್ದಲ್ಲಿ ಬುದ್ಧನಿದ್ದ;
ನನ್ನೊಳಗೆ ಏನೇನೋ ಆಗಿದ್ದ, ಎದೆಯ
ಅಚ್ಚು ಮನೆಯಲ್ಲಿ ಪ್ರೀತಿಯೊತ್ತುವ ಅಕ್ಕರದ
ಮೊಳೆಗಳ ಕೀಳುವ ಕೂಲಿ ಹುಡುಗನಾಗಿದ್ದ!

ಮಳೆಯ ತುಂತುರುಗಳಲ್ಲಿ ಆಕಾಶ
ಕಣ್ಣೊಡೆದು ಆಗೀಗ ನೆನಪಾಗಿ
ಮರಗಟ್ಟಿ ಮರವಾಗಿ ಹೋಗುತ್ತಿದ್ದ ಬುದ್ಧ
ನನ್ನ ನಡುರಾತ್ರಿಯ ಹಾದಿಗಳಲ್ಲಿ
ತೆಂಗುಗರಿಗಳ ತುಂಬು ಬೆಳಕಂತೆ
ವಾಲಾಡಿ ಎದುರಾಗುತ್ತಿದ್ದ.

**ಸದಾ ಎದೆಯ ಏರಿಳಿತಗಳಲ್ಲಿ**
**ಅವನ ಪಿಸುಸದ್ದುಗಳು.....**

ಅರಮನೆಯ ಸುಖಪುರುಷ ಎಲ್ಲ
ಎಲ್ಲ ಬಿಟ್ಟವನೆಂಬ ಸೋಜಿಗದ
ಸೂಜಿನೊಣ; ರೇಶಿಮೆಯ ಕೋಶಗಳ
ಸರಾಗ ಕೊರೆದು ನಿಂತ
ಸಂತ
ಕೇವಲ
ರೋಗ ಮುಪ್ಪು ಸಾವೆಂಬ
ಭೀತಿ ಕೌತುಕಗಳ ಬೆಟ್ಟ ಬೆನ್ನಟ್ಟಿ
ಎಲ್ಲಾ ಬಿಟ್ಟನೆ?

**ಎಲ್ಲಾ ಬಿಟ್ಟನೆ**
**ಕಡೆಗೆ ಕಟ್ಟಿಕೊಂಡವಳನ್ನೂ!**

ಧರ್ಮವನ್ನು ದಂದುಗ ಮಾಡಿ
ಅಗ್ನಿ ಘೋರಿ ಪೃಥ್ವಿಗಳ ನಡುವೆ
ಹಾಯಾಗಿ ತಲೆಯಿಟ್ಟು ತೂಕಡಿಸೊ ಮಂದಿಗೆ
ಈ ರೋಗ ಈ ಮುಪ್ಪು ಈ ಸಾವು
ಈಗ ಎಲ್ಲ ಸದರದ ಸರಕುಗಳು

ಇದ್ದಕ್ಕಿದ್ದಂತೆ ಎಂದೋ ಎದುರಾಗಿ
ನೋಡಯ್ಯ ಹುಳವೆ ನಾನೆ ರೋಗ.... ಇಗೋ
ನೋಡಯ್ಯ ಜಂತುವೆ ನಾನೆ ಮುಪ್ಪು....
ನೋಡಿಗೋ ಮುಖಗೆಟ್ಟವನೆ ಮುಖಿಯಾಗಿ
ನಿಂತಿರುವೆ ನಾನಿನ್ನ ಮೃತ್ಯು
ಎಂದು ಯಾರು ಅಬ್ಬರಿಸಿದರೂ ಕೇರು ಮಾಡದ
ಸುಕುಮಾರ ಪದೆಗೀಗ ನಿದ್ರೆಯೇ ಸರ್ವಸ್ವತ್ತು.

**ಬುದ್ಧನೆಂಬ ವಿವೇಕಿಯೇ ಹೇಳು**
**ಸೀನಾದರೂ ಇವಕ್ಕೆಲ್ಲಾ ಯಾಕೆ ಹೆದರಿದೆ?**

ಅರಮನೆಯ ಲಾಂದ್ರಗಳು ಬೆಳಕು ಬೀರಲಾರದಷ್ಟು
ಮಂಕಾಗಿ ಹೋಗಿದ್ದ ನೆಟ್ಟ ನಡುರಾತ್ರಿ
ಚಂದ್ರಮನ ತಿಳು ಬೆಳದಿಂಗಳನ್ನೆ
ಪಲ್ಲಂಗದ ಮೇಲೆ ಚಂದಾಗಿ ಹಾಸಿ
ಚಂದಾಗಿ ಹೊದಿಸಿದವಳು, ಬೆರಳ
ತುದಿಯಿಂದ ತುಟಿಯ ಬದಿಯಿಂದ
ಸ್ವರ್ಗದ ಕವಾಟಗಳ ತೆರೆದು ತೋರಿದವಳು

ಯಾವಾಗಲೋ ಎಲ್ಲೋ ಎದುರಾಗಬಹುದಾದ
ರೋಗ ಮುಪ್ಪು ಸಾವುಗಳಿಗಿಂತ
ಸುಖದ ತೆನೆಯಾಗಿದ್ದವಳು
ಈಗ ಈ ಕ್ಷಣ ಕಡೆಗಣ್ಣಾಗಿಬಿಟ್ಟಳೆ?
ನೀಹಾರಿಕೆ ನಕ್ಷತ್ರಗಳ
ನಸುಬೆಳಕಲ್ಲಿ ಅವಳ ಕೆನ್ನೆಗಳ ನವಿರು
ಕುರುಹುಗಳು ಮಾಸಿಹೋದವೆ?

ಸಾವಿಗೆ ಹೆದರಿದ ಈ ನಿಶ್ಚಲಸ ನಿಡುಸುಯ್ಲಿನಲ್ಲಿ
ಪೂರ್ಣಿಮೆಯ ಕಡಲುಗಳು ಉಬ್ಬರ
ಕಳಕೊಂಡವೆ? ಛಲವೆಂಬ ತೊಲೆಗಳು
ಜಗತ್ತಿನ ವಿಹಾರಗಳ ನಿರ್ಮಿತಿಗೆ
ತೋಪಡಾ ಹೊಡೆಸಿಕೊಂಡು ಮಿಂಚಿದವೆ?

ಕಡೆಯ ಸುತ್ತಿನ ರೋಗ ಮುಪ್ಪು ಸಾವು
ಅಂತಿರಲಿ... ಹುಟ್ಟಿನ ಅರಿವೂ ಇರದ ರಾಹುಲ
ಕೂಡ ನಿನ್ನ ಮನಸ್ಸಿನ ಅಲೆಗಳಲ್ಲಿ ಮಿಸು
ಕಾಡದೆ ಹೋದನೆ?

**ಕುರುಡು ಲೋಕಕ್ಕೆ ಕಣ್ಣು ಕೊಟ್ಟ**
**ಬುದ್ಧನೆ....ಈಗಲಾದರೂ ಹೇಳು**

ಸುಖವೆಂದು ಸಮುದ್ರ ಅಷ್ಟೊಂದು ಆಳವೆ?
ಆಸೆ ಹೊಸೆಯುವ ಆಗಸದ ಕಣ್ಣಲ್ಲಿ ಅಷ್ಟೊಂದು
ಮಿಂಚುಗಳೆ? ಒಂದನ್ನೊಂದು ಕೊಂದು
ತಿನ್ನುವ ಪಶು ಪಕ್ಷಿ ನರವಾನರ
ಹುಲ್ಲೆಸಳು ಹಿಂಸೆಯಾಚೆಗಿನ ದಾರಿಹೋಕರೆ?

ತೊಟ್ಟು ಒಣಗಿ ಫಟ್ಟನು ದುರುವ
ಯಾವ ಮರದ ಮುದಿ ಎಲೆಗೆ
ಪಾಯಸದ ಬಟ್ಟಲಿನ ಆಸೆ... ಜೀವ
ಪಡೆಯುವ ಹಂಬಲದ ಹಾದಿಯಾಯಿತು...

**ಬುದ್ಧನೆಂಬ ಅಸುಖಿಯೆ**
**ಈಗಲಾದರೂ ಹೇಳು?**

ಬುದ್ಧಂ ಶರಣಂ ಗಚ್ಛಾಮಿ
ಸಂಘಂ ಶರಣಂ ಗಚ್ಛಾಮಿ

## ಬೆರಗು

ಈ ಸಪ್ಪಟ್ಟು ಸಮರಾತ್ರಿ ಈಗ
ಇಲ್ಲೊಂದು ಹೂವಿಗೆ ಅರಳುವ ಆತುರ
ರಸರಸ ಮರಕುಯ್ಯುವ ಗರಗಸ
ಒಳಗೂ ಹೊರಗೂ ಹೊಕ್ಕಿ ತಿಕ್ಕುತ್ತಾ
ಸರಭರ ಸದ್ದಲ್ಲಿ ಬುಸುಗುಟ್ಟುತ್ತಾ
ಯತ್ನಿಸುತ್ತಿವೆ ಸಹಭಾಗಿತ್ವದಲ್ಲಿ
ಒಂದನ್ನು ಒಡೆದು ಎರಡಾಗಿ ಸೀಳಿ
ಮತ್ತೆ ಎರಡನ್ನು ಘಟ್ಟಿಸಿ ಒಂದಾಗಿ ಮೂಡಿ
ಇರುಳು ಉರುಳುತ್ತಲೇ ಇದೆ
ಕಾಲ ಚಲಿಸುತ್ತಲೇ ಇದೆ
ಎಷ್ಟೊಂದು ಯುಗಯುಗಗಳಿಂದ
ಗಾಳಿ ನೀರು ನೆಲ ಬೆಂಕಿ ಮುಗಿಲು
ಭಿನ್ನಭಿನ್ನವಾಗಿದ್ದ ವಿಚ್ಛಿನ್ನ ಭೂತಗಳು
ಸೇರಿಕೊಂಡವು ಹೇಗೆ ಇಲ್ಲಿ ಜಬರ್ದಸ್ತಿನಲಿ
ಯಾರಪ್ಪ ಭಗವಂತ ದಿಕ್ಕು ದಿಕ್ಕುಗಳ
ಸೇರಿಸಿ ದಿಜ್ಞ್ಮೂಢ ನಿಂತವನು

ಕಲಾಯಿ ಪಾತ್ರೆಯಲಿ ಬೇಯುತ್ತಿದ್ದ
ಬಾಡುಬಳ್ಳಿಗಳಿಗೆ ವಿಷ ಮಿಲಾಯಿಸಿ
ಗಬಕ್ಕನೆ ತಿಂದವರ ಕರುಳ ನೀಲಿಗಟ್ಟಿಸಿ
ಕೊಂದವರು ಯಾರಪ್ಪ ಜವರಾಯ
ಇದನ್ನೆಲ್ಲ ಅರಗಿಸಿಕೊಂಡು ತಲೆಯೆತ್ತಿ
ಮತ್ತೆ ಕಾಲೆತ್ತಿ ನಡೆದವರು ಯಾರಪ್ಪ

ನನ್ನ ಒಬ್ಬಂಟಿ ಮನೆಯಂಗಳದಲ್ಲಿ
ಚೆಲ್ಲಿದ ಬೆಳುದಿಂಗಳ ದಾಟಿ
ಬಂದವಳು ಯಾರಪ್ಪ
ಇಷ್ಟು ಸಪ್ಪಟ್ಟು ಸಮರಾತ್ರಿ
ಕದತಟ್ಟಿ ಕೂಗಿ ಕರೆದವಳು
ನನ್ನೊಳಗೆ ಇಷ್ಟೆಲ್ಲ ತುಂಬಿ
ಚನ್ನಂಗಿ ಬಿದುರಂತೆ
ವಾಲಾಡಿ ನೆರೆದವಳು ಯಾರಪ್ಪ?

## ಕನಕಿಂಡಿ ಕುರುಬಾಲೆ

ಕುರುಬಾಲೆ ತಂದಾರೆ ಕೈಜಿಡ್ಡು ಮೈಜಿಡ್ಡು
ಉಟ್ಟಿರುವ ಸೀರೆ ಬಲು ಜಿಡ್ಡು
ಕುರುಬಾರ ಸಂಗ ಬ್ಯಾಡ - ಎಂದವನೆ
ಬಂದವನೆ ಬೀದಿ ಬ್ರಹ್ಮಾಂಡದೊಳಗೆ ಜನಿವಾರ
ಪನಿವಾರ ಅಕ್ಷರದ ಶ್ರೀರಕ್ಷೆ ದಣಿದ ನಾಲಗೆಗೆ
ಯಾಕೆ ಬೇಕಿತ್ತು ಇಷ್ಟು ದೂರದ ವೈಕುಂಠ
ಕೋರಿ ಕಂಬಳಿಗೆ ಎಷ್ಟಿತ್ತು ಹೇಳು ಸಂಕಟ
ಕಾಳುದಾಸನ ಮನೆಯ ಕೀಳುದಾಸ ಹಾಳುದಾಸ
ಮೂಳುದಾಸ ಅಳಿನಾಳಿನದಾಸ ಅಡಿದಾಸ
ಹಸಿದವಗೇಕೆ ವ್ಯಾಸಪೀಠದ ಸಾವಾಸ

ಜೀವಸೆಲೆ ಬತ್ತಿ ಸುಡುವ ನೆತ್ತಿ
ಬೆಟ್ಟ ಬಯಲು ಹತ್ತಿ ಇಳಿವ ಮಂದಿಗೆ
ಥಟ್ಟನೆ ತಾಳತಂಬೂರಿ ಪಾಡೊಂಬಲ
ಬಿಳಿ ತೊಗಲ ಸಂತೆಯಲಿ ಕರಿಕಂಬಳಿ
ಹದವಾಗಿ ಮೆದುವಾಗಿ ಸವರಬೇಕಲ್ಲ ತುಪ್ಪಳ

ನಾಯಕನಾಗಿ ಊರೂರು ಕಟ್ಟಿ ಮಲ್ಲಗಂಬಗಳ ಮೇಲೆ
ನಿಲ್ಲಬಹುದಿತ್ತು ಬಹುಪರಾಕುಗಳ ಮಾಲೆ
ಮಲ್ಲಿಗೆ ಮಾಡಿ ಪಟ್ಟದಂಬಾರಿಯಲಿ
ವಧೂಟಿಯ ಕಿರುಬೆರಳ ಸ್ಪರ್ಶಕ್ಕೆ ಬೆಚ್ಚಗೆ; ಬಾಚಿ
ತಬ್ಬಿಕೊಂಡಿರಬಹುದಿತ್ತು ಸಿಕ್ಕ ಕನಕ
ಕಿರೀಟದ ಕಿಮ್ಮತ್ತೇನು ಕಡಿಮೆಯೆ?
ಸುಖದ ಸುಪ್ಪಲಾಲಿಯ ಬಿಟ್ಟು ಕಳ್ಳಗಿಂಡಿಯ
ಕಣ್ಣೆತ್ತ ನಾಲಗೆ ನರಕಕ್ಕೆ ಯಾಕಿಳಿಯಬೇಕಿತ್ತು!

ನೆಲ್ಲು ಮೆಲ್ಲುವ ನರ ನಡುವೆ ಕಡು ರಾಗಿ
ಬಿಳುಪಾಗಿ ಜೀವ ಪಡೆಯಲು ಕಂಬಿ ಎಣಿಸಿ
ಸತ್ತವನು ಸತ್ತಂತೆ ಯಾವ ಮೋಹನ ತರಂಗಿಣಿ
ಹಾಡಬೇಕು ಹೇಳು ಕೀರ್ತನ ಕೇಸರಿ
ಗೊಲ್ಲ ದೇವ ಕುರಿ ಭಕ್ತ
ದೇಶ ಕಾಲಾತೀತ ಸಂಧಿ ಹೇಗೆ ಸಾಧ್ಯ
ಸುತ್ತ ತೋಳ ಜಮಾಬಂದಿ ಉಳಿದ
ಹಾಳೂರಿಗೊಂದು ಒಂಟಿ ದೊಂದಿ

ಕನಕಿಂಡಿ ಕುರುಬಾಲೆ ಇಬ್ಬಂದಿಗಳೇ ಹೇಳಿ
ಯಾವುದು ಸತ್ಯ? ಇಷ್ಟು ದೂರ ದಣಿದ
ದಾರಿಯಲಿ ನನ್ನ ಮಕ್ಕಳು ಹುಡುಕಲಿ
ಒಡೆದ ಕಿಂಡಿಗಳಲ್ಲಿ ಉರಿದ ದಂಡೆಗಳಲ್ಲಿ
ಇಲ್ಲದ್ದ ಕಾಣುವುದು ಬಿಟ್ಟು
ಸಧ್ಯ ನಾನು ಮರಳುತ್ತೇನೆ ವಧೂಟಿಯ
ಸುಖದ ನೆನಪತ್ತ ಕಂಬಳಿಯ ಬಿಸಿಯತ್ತ

## ನಾನು ಸರ್ವಾಧಿಕಾರಿ

"ಶಾಸಕರ ಭವನದ ಹೊಸ ಕಟ್ಟಡವನ್ನು ಸರ್ವಾಧಿಕಾರಿ
ಬಂದರೆ ಬಡವರಿಗೆ ಹಂಚುತ್ತಾನೆ" ಎಂದ ಕ್ರಾಂತಿಕಾರಿ.

ನಾನೇ ಸರ್ವಾಧಿಕಾರಿಯಾದರೆ ಇಡೀ ಶಾಸಕರ ಭವನವನ್ನು
ನನ್ನ ಸುಂದರಿಯರ ಸಜ್ಜೆ ಕೋಣೆಗಳನ್ನಾಗಿ ವಿಂಗಡಿಸಿ
ಸುತ್ತ ಸುತ್ತ ಸುತ್ತಾಲೂ ವಿಧಾನಸೌಧದ ಸುತ್ತಲೂ
ಎತ್ತರದ ಗೋಡೆ ಕಟ್ಟಿ; ಖೋಜಾಗಳಿಗೆ ಸಿಪಾಯಿ ವೇಷ
ತೊಡಿಸಿ ಕೈಗೆ ಗುಂಡಿಲ್ಲದ ಬಂದೂಕು ಕೊಟ್ಟು
ಕಾವಲಿಗೆ ನಿಲ್ಲಿಸಿ ಬಿಡುತ್ತೇನೆ.

ವಿಧಾನಸೌಧವಂತೂ ನನ್ನ ಮಹಾರಾಣಿಯ ಅಂತಃಪುರ
ಅಲ್ಲಿ ಮಂತ್ರಿಗಳು ಕೂರುವ ಕೋಣೆಗಳಲ್ಲಿ
ಒಂದೊಂದು ತೊಟ್ಟಿಲು.......ಎಲ್ಲ
ಎಲ್ಲ ಕಡೆ ಅಳುವ ನಗುವ ನನ್ನ ಮಕ್ಕಳೇ
ಹೇಲು ಉಚ್ಚೆ ಬಳಿಯುವ ಆರ್ಡರ್ಲಿಗಳು ಕನಿಷ್ಠ
ಐಎಎಸ್ ಪಾಸಾಗಿರಬೇಕು.

ಸರ್ವಾಧಿಕಾರಿಯ ಆಡಳಿತದಲ್ಲಿ ನ್ಯಾಯಾಲಯಕ್ಕೆ
ಕೆಂಪು ಕಟ್ಟಡ ಬೇರೆ ಕೇಡು; ಅಲ್ಲಿ ನನ್ನ
ಪಿಎ ಪಿಎಸ್‌ಗಳದೇ ಜಾಡು. ನನ್ನ ಸಿಂಹಾಸನವೂ
ಅಲ್ಲೆ. ಸಿಂಹಾಸನ ಅಂದರೆ ಮಹಾರಾಜರ ಸಿಂಹಮುಖಿ
ಚಿನ್ನದ ಅಂಬಾರಿಯಂತಲ್ಲ ಸಾಧಾರಣ ಎತ್ತರದ ಮೆತ್ತೆ.

ನಾನು ಹೇಳಿದಂತೆ ಬರೆಯುವ ಒಂದಷ್ಟು
ಗಿಣಿ ಗುಮಾಸ್ತರು ಮಲ್ಟಿಸ್ಟೋರೇಡ್ ಬಿಲ್ಡಿಂಗ್‌ನಲ್ಲಿ
ವಂಡರ್‌ಫುಲ್ ಅಂಡರ್ ಸೆಕ್ರೆಟರಿ ಹಾಗೂ ಬ್ಯೂಟಿಫುಲ್
ಡೆಪ್ಯೂಟಿ ಸೆಕ್ರೆಟ್ರಿಗಳು. ಅವರ ಬೀಸುವ ಸೆರಗಲ್ಲಿ
ನಾಗಸಂಪಿಗೆ ಘಮಲು ಮೆಲ್ಲನೆ ಲಿಫ್ಟೇರಬೇಕು.

ಬಹಳ ದಿನ ಉಳಿಯುವ ಗ್ಯಾರಂಟಿಯಿಲ್ಲದ
ವಿಶ್ವೇಶ್ವರಯ್ಯ
ಟವರ್ ಬಗ್ಗೆ ನಂಬಿಕೆ
ಇಲ್ಲದ್ದರಿಂದ ನಾನು ಅತ್ತ ತಲೆ
ಹಾಕುವುದಿಲ್ಲ. ಅದು ಲಾಟರಿ ಹೊಡೆಯುತ್ತಿರಲಿ.

ಪಿ.ಯು.ಸಿ. ಬೋರ್ಡನ್ನು ಖಂಡಿತಾ ಜೈಲಿನ ಒಂದು
ಪ್ರಧಾನ ಸೆಲ್ ಮಾಡಿಬಿಡುತ್ತೇನೆ. ಬೇಕಾದರೆ ಅದಕ್ಕೆ
ಸಿಇಟಿ ಸೆಲ್ ಎಂದು ಹೆಸರಿಟ್ಟು ಬಿಡುತ್ತೇನೆ.

ಶಾಸಕರಭವನ, ವಿಧಾನಸೌಧ ಬಿಟ್ಟು
ನನಗೆ ಗೊತ್ತಿಲ್ಲದ ಇತರೇ ಕಟ್ಟಡಗಳ
ಬಗ್ಗೆ ಬಡವರಾದ ನೀವು ಅರ್ಜಿಸಲ್ಲಿಸಿದರೆ ನಿಮಗೆ
ಮಂಜೂರು ಮಾಡಬಹುದು.........!

## ೨೦೦೦ಕ್ಕೆ ಮನುಷ್ಯರು

ನಾವು ಮನುಷ್ಯರು, ನಿಂತ ಕಡೆಯೇ ನಿಲ್ಲಬಲ್ಲ
ತಾಳ್ಮೆ ಇರುವ ವಿವೇಕಿಗಳು. ಕಾಲ ಹಾಗಲ್ಲ
ಎಲ್ಲವನ್ನೂ ನುಂಗುತ್ತ ನೊಣೆಯುತ್ತ ಚಲಿಸುವ
ಹಂಬಲವುಳ್ಳದ್ದು. ಹೊಸ ಹೊಸ ಹೂವು ಅರಳುತ್ತವೆ
ಅರಿವಿರದ ಹಾಗೊಂದು ಗಂಧ ದೂರ ದೂರದವರೆಗೆ
ಚಲಿಸುತ್ತದೆ. ಸೂರ್ಯ ಶಾಖ ತಂಪುಗಳು ಏರಿಳಿಯುತ್ತವೆ.

ಮನುಷ್ಯ ನಿಂತೇ ಇರುತ್ತಾನೆ ಮೈಕಾಯಿಸಿಕೊಳ್ಳುತ್ತಾ
ಬೇಕೆಂದಾಗ ಕೋವಿ ಕೈಲಿಡಿದು ಸುತ್ತ ಮುತ್ತಲಿನ
ಚಲನೆಗಳನ್ನು ಕಾಲನಡಿಗೆ ತಳ್ಳುತ್ತ ಹೊಸ ಹೊಸ
ರೋಗ ರುಜಿನಗಳು ಮನುಷ್ಯನ ಬಳಿಗೆ ಬರುತ್ತವೆ.
ಮನುಷ್ಯ ನಿಂತಲ್ಲೇ ದೇವತೆಗಳನ್ನು ಸೃಷ್ಟಿಸಿಕೊಂಡ
ಗತ್ತಿನಲ್ಲಿ ಮತ್ತೆ ಕತ್ತೆತ್ತಿ, ಆಕಾಶದತ್ತ ನೋಡುತ್ತಾನೆ.

ಈಗ ಯಾವುದಕ್ಕೂ ಕೊರತೆಯಿಲ್ಲ; ಭತ್ತ ರಾಗಿ
ಕಬ್ಬು ಕೋಳಿ ಮೊಲ ಹಾಲು ತುಪ್ಪ ಎಲ್ಲ ನಾಲ್ಕು
ಪಟ್ಟು ಹೆಚ್ಚು ಬೆಳೆಯುತ್ತವೆ; ತಿನ್ನುತ್ತ ನಿಂತ ಮನುಷ್ಯ
ಕೂಡ ದುಪ್ಪಟ್ಟಾಗಿಬಿಟ್ಟಂತೆ ಗಟ್ಟಿ ಕಾಲೂರಿ ಮತ್ತೆ
ನಿಲ್ಲುತ್ತಾನೆ. ಗುಡಿ ಚರ್ಚು ಮಸೀದಿಗಳನ್ನು ಕಟ್ಟುವ
ಮಂದಿ ಕತ್ತಲಲ್ಲಿ ಹುಡುಕುತ್ತಾರೆ ಅವುಗಳನ್ನು ಬೀಳಿಸುವ
ಹತಾರಗಳಿಗೆ ಸಮಾಜವಾದಿ ಆಚಾರ್ಯರ ಮನೆಯ ಮಡಿ

ಅಮ್ಮ ಮಡಿಲ ತುಂಬ ಕಟ್ಟಿಕೊಂಡು ಪ್ರಾರ್ಥಿಸುತ್ತಾಳೆ.
ದೇವರೆ ನನ್ನ ಕಣ್ಣೆದುರಿನ ಎಲ್ಲ ಚಲನೆಗಳನ್ನು ಕಾಪಾಡು
ಕೈಬಿಡದೆ. ತಾಯನ್ನು ತಾಯಂಥ ನೆಲವನ್ನು ಗದ್ದುಗೆದಾರರ
ಗುತ್ತಿಗೆಯಾಳ್ತನಕ್ಕೆ ಬಿಟ್ಟು ಮನುಷ್ಯ ಮತ್ತೆ ಮತ್ತೆ ನಿಲ್ಲುತ್ತಾನೆ.
ಪೇಲವ ಕಣ್ಣುಗಳಲ್ಲಿ ಆಸೆ ಪೇರಲ ತುಂಬಿಕೊಂಡು. ನಿರ್ಬಲ
ಜಲ ಯಾರ ಪಾಪಗಳನ್ನು ತೊಳೆಯೆನೆಂದು ನಿಂತಲ್ಲೆ ನಿಂತು
ಕೊಳೆಯುತ್ತದೆ. ಹುಟ್ಟನ್ನು ಕೈಬಿಡದ ಕಾಲ ಹೊಸ ನಾವೆಗಳನ್ನು
ತೇಲಿ ಬಿಡುತ್ತದೆ. ತೂತುಬಿದ್ದ ಹಾಯಿನ ಪಟಗಳನ್ನು ಹೊಲೆಯುವ
ತಂತ್ರ ಗೊತ್ತಿರುವ ಮನುಷ್ಯ ಸೂಜಿಯ ಕಣ್ಣಲ್ಲಿ ಕಣ್ಣಿಟ್ಟು
ಸ್ತಬ್ಧಗೊಳ್ಳುತ್ತಾನೆ. ಅವನಿಗೆ ಅರಳಿಯ ದಾರ ಭಾರವೆನಿಸಿ
ಸೋಮಾರಿ ಸುಮ್ಮನೆ ನಿಂತು ಬಿಡುತ್ತಾನೆ. ತಲೆಯಲ್ಲಿ
ಹುಟ್ಟಿದವನಿಗಿಂತ ಪಾದದಲ್ಲಿ ಹುಟ್ಟಿದವ ಅಧಿಕಾರ ದಕ್ಕಿದ
ಮದದಲ್ಲಿ ಅಂದುಕೊಳ್ಳುತ್ತಾನೆ. ಅವರು ಆಗ ಹೇಳಿ ಹಳಿದ ಹಾಗೆ
ನಾನು ನಿಜವಾಗಿಯೂ ಚಾಂಡಾಲನೇ ಇರಬೇಕು. ಗಾಂಧಿ ಕಾಲದ
ಹಣ್ಣು ನಾಲಗೆ ನುಡಿಯುತ್ತದೆ ನಮಗೆ ಬ್ರಿಟಿಷರೇ ಇರಬೇಕಿತ್ತು.

ಎತ್ತರದ ಶಿಖರಗಳು ಕುಸಿಯುತ್ತಿರುತ್ತವೆ ಮನುಷ್ಯನ ನಿಲುವಿಗೆ
ಸಾಕ್ಷಿ ಹೇಳುವವರು ಇಲ್ಲದಂತೆ ಯಾವುದೋ ಕಂಪ್ಯೂಟರಿನ ಕೀಲಿಮಣೆ
ನಾನೆಲ್ಲ ಮುಚ್ಚಿಟ್ಟು ಹೇಳುತ್ತೇನೆಂದು ಸುಳ್ಳು ಸುಳ್ಳು ಅಫಿಡವಿಟ್
ಸಲ್ಲಿಸಿ ಗಂಭೀರಗೊಳ್ಳುತ್ತದೆ. ನೋಟರಿಗಳು ಗಾಬರಿಗೊಳ್ಳುತ್ತಾರೆ.
ಆತ್ಮ ಸಾಕ್ಷಿಯಿಲ್ಲದವರ ಆರ್ತನಾದ ಕೇಳಿ. ಮನುಷ್ಯ ನಿಂತೇ ಇಲ್ಲ
ಆದರೆ ನಿಂತಿದ್ದೇನೆಂದು ಪ್ರಮಾಣ ಕಲ್ಪಿಸಿ ಹೇಳುತ್ತಾನಲ್ಲ!
ಎಲ್ಲಿಯೂ ನಿಲ್ಲದ ಮನೆ ಕಟ್ಟದ ಕೊನೆಮುಟ್ಟದ ಅನಿಕೇತನ ತನಕ್ಕೆ
ಸಾಕ್ಷಿ ಬೇರೆ ಕೇಡು. ಮೂರು ವರ್ಷ ಮನುಷ್ಯನನ್ನು ಕೇವಲ
ಮನುಷ್ಯನನ್ನು ಕಿಂಚಿತ್ತಾದರೂ ಹೊತ್ತೊಯ್ಯಲಿ ಅವನು ಕೊಂಚದೂರ
ಕ್ರಮಿಸಲಿ ಚಲಿಸುವ ಕಾಲದೊಂದಿಗೆ ಬೀಸುವ ಗಾಳಿಯೊಂದಿಗೆ, ತುಂತುರು
ಮಳೆಯೊಂದಿಗೆ ಹಸಿರು ಹೂ ಹಣ್ಣು ಎಲೆ ಗಿಳಿಯ ಕಲರವ ಕನ್ನೆಯ ಸ್ನೇಹ
ಪುಟ್ಟ ಮಕ್ಕಳ ಒಡನಾಟ; ಹಾಲು ಮೊಳೆ ಅನ್ನ ಎಲ್ಲ ಸಮೃದ್ಧವಾಗಿರಲಿ.

---

ಎಲ್. ಎನ್. ಮುಕುಂದರಾಜ್, 'ಅಚ್ಚರಿ' ೩೭೦, ೧೦ನೇ ಕ್ರಾಸ್, ಟೀಚರ್ಸ್ ಕಾಲೋನಿ
ಐಸೆಕ್ ಬಳಿ, ನಾಗರಬಾವಿ , ಬೆಂಗಳೂರು - ೫೬೦ ೦೭೨

# ಬಂಡಾಯ ಸಂವೇದನೆ : ಚರಿತ್ರೆಯ ನಡಿಗೆ

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ

ಬಂಡಾಯ ಇವತ್ತಿಗೂ ಜೀವಂತ. ಇದು ಅವತ್ತು ಇತ್ತು, ಇವತ್ತು ಇಲ್ಲ ಎಂದು ಹೇಳುವವರು ಬಂಡಾಯವನ್ನು ಅವತ್ತಿನ ಮಾದರಿಯಲ್ಲಿಯೇ ಗ್ರಹಿಸುತ್ತಾ, ಅದರ ಚಲನ ಶೀಲತೆಯನ್ನು ನಿರಾಕರಿಸುತ್ತಾರೆ. ಅವರು ವರ್ತಮಾನದಲ್ಲಿ ಪಾದಗಳನ್ನಿಟ್ಟು, ಭೂತದಲ್ಲಿ ತಲೆಯನ್ನು ಹೊಕ್ಕಿಸಿದ ಸಾಂಸ್ಕೃತಿಕ ಮೂಲಭೂತವಾದಿಗಳಾಗಿ ಕಾಣುತ್ತಾರೆ. ಅವರನ್ನು Cultural Orientalist ಗಳಿಗೆ ಸಂವಾದಿಗಳಾಗಿ ಗುರುತಿಸಲು ಸಾಧ್ಯವಿದೆ.

ಬಂಡಾಯದ ಸಂವೇದನೆ ಯಾವತ್ತಿಗೂ ಜೀವಂತ. ಇದನ್ನು ಕನ್ನಡ ಸಾಹಿತ್ಯ ಪರಂಪರೆಯ ಹಿನ್ನೆಲೆಯಲ್ಲಿ ಆಡುತ್ತಿದ್ದೇನೆ. ಇಲ್ಲಿ ಎರಡು ಧಾರೆಗಳಿವೆ. ಒಂದು 'ಅಕ್ಷರ' ರೂಪದ ಶಿಷ್ಟ ಸಾಹಿತ್ಯ. ಇನ್ನೊಂದು 'ಮಾತು' ರೂಪದ ಜನಪದ ಸಾಹಿತ್ಯ. ನಮ್ಮ ಚರಿತ್ರೆಯಲ್ಲಿ ಅಕ್ಷರ ಸಂಸ್ಕೃತಿ ಮತ್ತು ಪರಂಪರೆಯಲ್ಲಿ ಕಾಣುವ ಮನುಷ್ಯ ಬದುಕೇ ಬೇರೆ. ಅಂತೆಯೇ ಮಾತು ಮಾತ್ರವಾದ ಅಭಿವ್ಯಕ್ತಿಯನ್ನು ರೂಢಿಸಿಕೊಂಡ ಸಂಸ್ಕೃತಿ ಮತ್ತು ಪರಂಪರೆಯಲ್ಲಿ ಕಾಣುವ ಮನುಷ್ಯ ಬದುಕೇ ಬೇರೆ. ಒಂದರಲ್ಲಿ ಬುದ್ಧಿಯ ಬಲದಿಂದ ಬದುಕು ನಡೆಯುತ್ತಿದ್ದರೆ, ಇನ್ನೊಂದರಲ್ಲಿ ಬೆವರಿನ ಬಲದಿಂದ ಬದುಕು ನಡೆಯುತ್ತಿರುತ್ತದೆ. ಮೂಲಭೂತವಾಗಿ ಬುದ್ಧಿ, ಬೆವರುಗಳೆರಡೂ ಸಮಾನ ಮಹತ್ವದವೆ. ಆದರೆ ಬುದ್ಧಿಯನ್ನು ಆಡುತ್ತಾ ಬಂದ ವ್ಯಕ್ತಿ ತಾನಾಡಿದ್ದನೇ ಮಂತ್ರವನ್ನಾಗಿಸುತ್ತಾ ಸಮಾಜದ ಮೇಲ್‌ಸ್ತರಕ್ಕೆ ಏರಿದರೆ; ಆ ತಂತ್ರಕ್ಕೆ ಕಣ್‌ಕಣ್ ಬಿಟ್ಟ ಬೆವರಿನ ವ್ಯಕ್ತಿ ಬಾಗುತ್ತಾ, ಸಮಾಜದ ಕೆಳಸ್ತರಕ್ಕೆ ಇಳಿದ. ಇಂತಹ ಶ್ರೇಣೀಕೃತ ವ್ಯವಸ್ಥೆಯ ಪೋಷಕ ಶಕ್ತಿಯಾಗಿ ಅಕ್ಷರವು ಪಕ್ಷಪಾತಿ ಧೋರಣೆಯನ್ನು ತಳೆದದ್ದು ಒಂದು ವ್ಯಂಗ್ಯ. ಅದರಂತೆಯೇ ಮೌಖಿಕ ಪರಂಪರೆಯಾದ ಮಾತು ಸಹ ಅಕ್ಷರಕ್ಕೆ ಪೂರಕವಾಗಿ ನಿಂತದ್ದು ದೊಡ್ಡ ದುರಂತ. ಆದ್ದರಿಂದಲೇ ಯಥಾಸ್ಥಿತಿವಾದವನ್ನು ಪೋಷಿಸುವ ಅಕ್ಷರ ಸಾಹಿತ್ಯ ಮತ್ತು ಜನ ಸಂಸ್ಕೃತಿ ಹಾಗೂ ಅದರ ಪ್ರಭಾವ ವಲಯದಲ್ಲಿ ನಡೆಯುತ್ತಾ ತಾನೂ ಅದರಂತಾಗುವ ಆದರ್ಶವನ್ನು ಹೊತ್ತ ಮಾತು ಮೂಲದ ಜನಪದ ಸಾಹಿತ್ಯ ಮತ್ತು ಸಂಸ್ಕೃತಿಗಳ ನಡುವೆ ಮೂಲಭೂತ ಕಂದಕಗಳು ಉಳಿಯುವುದು ಸಾಧ್ಯವಾಗಲಿಲ್ಲ. ಆದ್ದರಿಂದ ಅಲ್ಲಿ ಸ್ತ್ರೀ

ಕಣ್ಣೀರನ್ನು ಹರಿಸಿದರೆ ಇಲ್ಲಿಯೂ ಸಹಜವಾಗುತ್ತದೆ. ಇದೇ ನಿಟ್ಟಿನಲ್ಲಿ ಅಲ್ಲಿಯ ದಲಿತ ಇಲ್ಲಿಯ ದಲಿತನಿಗಿಂತ ಭಿನ್ನನಾಗಲಿಲ್ಲ.

ಹೀಗೆ ಕನ್ನಡ ಪರಂಪರೆಯನ್ನು ಕಟ್ಟಿಕೊಳ್ಳಲು ಸಹಾಯಕವಾಗಿರುವ ಎರಡೂ ಧಾರೆಗಳಲ್ಲಿ ಮೌಲ್ಯ ಪ್ರಜ್ಞೆ ಒಂದೇ ಆಗಿರುವುದರಿಂದ, ಎರಡೂ ಪುರುಷ ಪ್ರಧಾನ ಮತ್ತು ಅವುಗಳ ಪರವಾದ ವ್ಯವಸ್ಥೆಯನ್ನು ಪೋಷಿಸುತ್ತಾ ಬಂದಿವೆ. ಇದು ಸ್ತ್ರೀ ಸಂವೇದಿ ನೆಲೆಯಲ್ಲಿ ಆಡಿದ ಮಾತು. ಇನ್ನು ವರ್ಗ ಸಂವೇದಿ ನೆಲೆಯಲ್ಲಿ ಮಾತನಾಡುವುದಾದರೆ, ಎರಡೂ ಧಾರೆಗಳಲ್ಲಿ ವ್ಯಕ್ತವಾಗಿರುವ ಆಶಯಗಳು ಪ್ರಧಾನವಾಗಿ ಮೇಲ್ವರ್ಗ ಪರವಾದುವೇ. ಹೀಗೆ ಅಕ್ಷರ ಮತ್ತು ಮೌಖಿಕ ಪರಂಪರೆಯಲ್ಲಿ ದಾಖಲಾಗುತ್ತಾ ಬಂದ ಜನ ಸಂವೇದನೆಗಳಲ್ಲಿ ಬಂಡಾಯದ ಧ್ವನಿ ಅತ್ಯಂತ ಕ್ಷೀಣ. ಆದರೆ ಶೋಷಣೆಗೆ ಒಳಗಾಗುತ್ತಾ ಬಂದ ಈ ವರ್ಗಗಳು ತಮ್ಮ ಉಸಿರನ್ನು ಒಂದಿಷ್ಟು ಬಿಸಿಯನ್ನಾಗಿ ಮಾಡಿಕೊಂಡಿರಲಿಲ್ಲವೆ? ಅದಕ್ಕೆ ಉತ್ತರವೆಂದರೆ, ಅವರ ಬಂಡಾಯವು ಮೌನ ಸ್ವರೂಪದ್ದು. ಆ ಮೌನವು ಮಾತಾಗುವ ಅಥವ ಅಕ್ಷರವಾಗುವ ಸನ್ನಿವೇಶ ಅಂದು ಇರಲಿಲ್ಲವಾದ್ದರಿಂದ ಅವರ ಸ್ವರೂಪವು ಮೌನದ್ದೇ ಆಗಿತ್ತು. ಇದು ಸಾವಿರಾರು ವರ್ಷಗಳ ಕನ್ನಡ ಅಥವ ಭಾರತೀಯ ಪರಂಪರೆಯದ್ದು.

ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಪರಂಪರೆಯಲ್ಲಿ ಅಂತಹ ಮೌನ ರೂಪದ ಬಂಡಾಯ ಮಾತಾದದ್ದು ಮೊದಲಿಗೆ ಶರಣ ಯುಗದಲ್ಲಿ. ಅಕ್ಕಮಹಾದೇವಿ ಇದಕ್ಕೆ ಮೊದಲಿಗಳಾಗುತ್ತಾಳೆ. ಇವಳ ಸಾಲಿನಲ್ಲಿ ಸಂಕವ್ವೆ, ಕಾಳವ್ವೆ ಮೊದಲಾದ ಎಲ್ಲಾ ಜನವರ್ಗಗಳಿಂದ ಬಂದ ಮಹಿಳೆಯರು ಮಾತಾಡುತ್ತಾರೆ. ಇವರು ಶರಣರ ಗೌರವಕ್ಕೆ ಮಾತ್ರ ಪಾತ್ರರಾಗುತ್ತಾರೆಯೇ ಹೊರತು ಸ್ತ್ರೀಯನ್ನು ಒಳಗೊಂಡ ಒಟ್ಟು ಸಮಾಜಕ್ಕೆ ಒಪ್ಪಿತರಾಗಿದ್ದರೆಂದು ಹೇಳಲು ಸಾಧ್ಯವಿಲ್ಲ. ಇಲ್ಲಿ ಮಾದಾರ ಚೆನ್ನಯ್ಯ, ಹರಳಯ್ಯ ಮೊದಲಾದ ದಲಿತರು, ಅಂಬಿಗರ ಚೌಡಯ್ಯ, ಅಲ್ಲಮ ಮೊದಲಾದ ಕೆಳವರ್ಗದವರೂ ಮಾತನಾಡುತ್ತಾರೆ. ಬಸವಣ್ಣನ ಮಾತುಗಳಂತೂ ಪ್ರಸಿದ್ಧ.

ಹೀಗೆ ವಿವಿಧ ಜನಾಂಗ ಮೂಲಗಳಿಂದ ಹೊರಟ ಧ್ವನಿಗಳು ಸಮಾಜದ ತೀವ್ರ ಬದಲಾವಣೆಗೆ ಹಾತೊರೆದದ್ದು ಬಂಡಾಯದ ಪರಿಕಲ್ಪನೆಯ ಚರಿತ್ರೆಯಲ್ಲಿ ಮೊದಲ ಅಧ್ಯಾಯವಾಗುತ್ತದೆ.

ಇದಿಷ್ಟನ್ನು ಇಲ್ಲಿ ಹೇಳಲು ಕಾರಣವೆಂದರೆ, ಒಟ್ಟು ನಮ್ಮ ಪರಂಪರೆಯ ಉದ್ದಕ್ಕೂ ಮೌನದಲ್ಲಿ ಬುಸುಗುಟ್ಟುತ್ತಿದ್ದ ಬಂಡಾಯವು ಮೊಟ್ಟಮೊದಲಿಗೆ ಅಕ್ಷರ ರೂಪದಲ್ಲಿ ಅಭಿವ್ಯಕ್ತಗೊಂಡದ್ದು ಹನ್ನೆರಡನೆಯ ಶತಮಾನದಲ್ಲಿ ಮಾತ್ರ ಎಂದು ಹೇಳಲು. ಇದನ್ನು ಹೊರತುಪಡಿಸಿದರೆ ಆ ಘಟ್ಟ ಮತ್ತೊಂದು ವಿನ್ಯಾಸದಲ್ಲಿ ಮೈತಳೆದದ್ದು ಕಳೆದ ಶತಮಾನದ ಎಪ್ಪತ್ತರ ದಶಕದಲ್ಲಿ. ಅದು ಇಂದಿಗೂ ಮುಂದುವರೆದಿದೆ.

ಈ ನಡುವಿನ ಸಾಹಿತ್ಯ ಮತ್ತು ಸಂಸ್ಕೃತಿಯಲ್ಲಿ ಪ್ರತಿಭಟನೆಯ ನೆಲೆಗಳು ಇರುವುದಾದರೂ ಅವು ತೀವ್ರ ಸಾಮಾಜಿಕ-ರಾಜಕೀಯ ಪ್ರಜ್ಞೆಯಿಂದ ಹೊರಟು, ವ್ಯವಸ್ಥೆಯ ಸಮಗ್ರ ಬದಲಾವಣೆಗೆ ಹಾತೊರೆಯುವುದಿಲ್ಲ. ಅಲ್ಲಿ ಅವು ಮನುಷ್ಯರ ಧೋರಣೆಯಾದ ಕೆಲವು ನೆಲೆಗಳಾಗಿ ಮಾತ್ರ ಗೋಚರವಾಗುತ್ತದೆ. ಅದ್ದರಿಂದಲೇ ಅಂತಹ ಸಾಹಿತ್ಯವು ಸುಖಲೋಲುಪರ ಪರವಾಗಿ ಮತ್ತು ಅವರ ನಡುವೆ ಕಣ್ ಕೋರೈಸಿ ಉಳಿದು ಬರಲು ಸಾಧ್ಯವಾಗುತ್ತದೆ.

ಹೀಗೆ ಹೊಟ್ಟೆ ತುಂಬಿದವರು ಬರೆದ ಸಾಹಿತ್ಯ ಹೊಟ್ಟೆ ತುಂಬಿದವರನ್ನು ತಣಿಸಿತೇ ಹೊರತು ಹೊಟ್ಟೆ ತುಂಬದವರನ್ನು ತಣಿಸಲು ಸಾಧ್ಯವಾಗಲಿಲ್ಲ. ಇದನ್ನು ಪಂಪ ಮೊದಲಾದ ಬಹುತೇಕ ಕವಿಗಳಿಗೆ ಅನ್ವಯಿಸಬಹುದಾಗಿದೆ. ಅಲ್ಲಿ ಜನಪರವಾದ ಕೆಲವು ನೆಲೆಗಳು ಮೂಡಿದರೂ ಅವು ಮನುಷ್ಯ ಸಹಜವಾದವನಿಗೆ ಇರುವ ಅಂತಃಕರಣದ ಸಾಕ್ಷಿಗಳೇ ಹೊರತು ಒಟ್ಟು ಸಮಾಜದ ಸಮಗ್ರ ಬದಲಾವಣೆಯನ್ನು ಅಪೇಕ್ಷಿಸುವ ಆರೋಗ್ಯಕರ ದೃಷ್ಟಿಯದ್ದಲ್ಲ. ಇಲ್ಲಿ ಬಹುಜನ ಸಮುದಾಯಕ್ಕೆ ದೂರವಾದ ಸಂವೇದನೆಗಳಿವೆ.

ಹೀಗೆ ವಚನಕಾರರನ್ನು ಹೊರತುಪಡಿಸಿದಂತೆ ಮತ್ತು ಕೊಂಚ ಪ್ರಗತಿಶೀಲರನ್ನು ಹೊರತುಪಡಿಸಿ ಹೇಳುವುದಾದರೆ ಕಳೆದ ಶತಮಾನದ ಎಪ್ಪತ್ತರ ದಶಕದವರೆಗಿನ ಕನ್ನಡ ಸಾಹಿತ್ಯ ಬ್ರಾಹ್ಮಣಮಯ ವಾದದ್ದೇ. ಅದನ್ನು ಓದಿದ ಶೂದ್ರರು ಸಹ ಮಾನಸಿಕವಾಗಿ ಬ್ರಾಹ್ಮಣರಾಗತೊಡಗಲು ಯತ್ನಿಸಿದರೇ ಹೊರತು ಅದಕ್ಕಿಂತ ತೀರಾ ಭಿನ್ನವೇನೂ ಆಗಲಿಲ್ಲ. ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ವಿದ್ಯಾವರ್ಧಕ ಸಂಘ, ಮಠಗಳು-ಹೀಗೆ ಹಲವು ಸಂಸ್ಥೆಗಳು ಅದೇ ಪಾರಂಪರಿಕ ಸಾಹಿತ್ಯ ಧೋರಣೆಯನ್ನು ಹೊಂದಿದ್ದವೇ ಹೊರತು ಕ್ರಾಂತಿಕಾರೀ ಗುಣವನ್ನು ಹೊಂದಿರಲಿಲ್ಲ. ಆದ್ದರಿಂದಲೇ ೭೦ರ ದಶಕದ ಬಂಡಾಯ ಸಾಹಿತ್ಯ ಮತ್ತು ಸಂಘಟನೆಯು ಏಕಕಾಲಕ್ಕೆ ಈ ಬ್ರಾಹ್ಮಣೇಕರ ಸಂಘ ಮತ್ತು ಸಾಹಿತ್ಯಕ್ಕೆ ಭಿನ್ನವಾಗಿ ಆಲೋಚಿಸಿ, ಅವುಗಳಿಗೆ ಪರ್ಯಾಯವಾಗುವ ಸಾಂಸ್ಕೃತಿಕ ಶೋಧಕ್ಕೆ ತೊಡಗಿದ್ದು. ಇದು ಐತಿಹಾಸಿಕ ಬೆಳವಣಿಗೆ. ಇಲ್ಲಿ ಸಮಾಜದ ಎಲ್ಲಾ ವರ್ಗಗಳಿಂದ ಕವಿ-ಸಾಹಿತಿಗಳು, ಕಲಾವಿದರು ಎದ್ದು ಬಂದರು. ಕನ್ನಡ ಪರಂಪರೆ ಕಾಣದಿದ್ದ ಕಲಾಭಿವ್ಯಕ್ತಿ ಇಲ್ಲಿ ವ್ಯಕ್ತವಾಯಿತು. ಈ ಮೂಲಕ ಕೆಳವರ್ಗದ ಜನರಿಗೆ ಆತ್ಮವಿಶ್ವಾಸ ಕುದುರಿದ್ದಲ್ಲದೆ, ದೇಶದ ಆಗು-ಹೋಗುಗಳಲ್ಲಿ ತಮಗೂ ಹಕ್ಕುಂಟು ಎಂಬ ಪ್ರಜ್ಞೆಯನ್ನು ಚಳುವಳಿಗಳ ಮೂಲಕ ಹೊಮ್ಮಿಸಿದರು. ಈ ನೆಲೆಯಲ್ಲಿ ಸಾಹಿತ್ಯ ಮತ್ತು ಚಳವಳಿ ಒಟ್ಟೊಟ್ಟಿಗೆ ನಡೆದದ್ದಲ್ಲದೇ, ಅಲ್ಲಿ ಪುಟಿದೆದ್ದ ಚಿಂತನೆಗೆ ಸೈದ್ಧಾಂತಿಕತೆಯ ಸ್ಪರ್ಶವೂ ಪ್ರಾಪ್ತವಾಯಿತು. ಆದ್ದರಿಂದ ಇದು ನಂಬಿಕೆಗರ್ಹ ಸಾಹಿತ್ಯವಾಯಿತು. ಸಾಹಿತಿಗಳು ಸಹ ಆರಂಭದಲ್ಲಿ ಹಾಗೆಯೇ ಕಂಡರು. ನಂತರ ಅವರಲ್ಲಿ ಅನೇಕರು ಸಿದ್ಧಾಂತ ಮತ್ತು ನಡೆಗಳಲ್ಲಿ ಬಿರುಕನ್ನು ಪ್ರಕಟಿಸಿದ್ದರಿಂದ ಈ ಇಮೇಜ್ ಕೆಲವೇ ವರ್ಷಗಳಲ್ಲಿ ವಿಘಟನೆಗೆ ಒಳಗಾಯಿತು. ಅಂತಹ ಕೃತ್ಯದಲ್ಲಿ ದಲಿತ, ರೈತ ಮತ್ತು ಕನ್ನಡ ಚಳವಳಿಗಳ ಬಲದಲ್ಲಿ ಮೂಡಿದ ರಾಮಕೃಷ್ಣ ಹೆಗಡೆ ಸರ್ಕಾರ ದೈತ್ಯ ಹೆಜ್ಜೆಯನ್ನಿಟ್ಟಿತು. ಚಳವಳಿಗಳ ವಕ್ತಾರರು ಕ್ಷಿಪ್ರ ಕಾಲದಲ್ಲಿಯೇ ಸಿಂಹಾಸನಕ್ಕೆ ಹಾತೊರೆದದ್ದರಿಂದ ಚಳುವಳಿಯನ್ನು ಹಿಂದು ಮಾಡಿ, ತಮ್ಮನ್ನು ಮುಂದಕ್ಕೆ ಒಡ್ಡಿಕೊಂಡರು. ಹೀಗೆ ಬಂಡಾಯಗಾರರ ಅನೇಕ ಮಿತಿಗಳ ನಡುವೆಯೇ ಬಂಡಾಯ ಸಾಹಿತ್ಯ ಏರುಗತಿಯಲ್ಲಿಯೇ ನಡೆಯಿತೆಂಬುದು ವಾಸ್ತವವಾಗಿದೆ.

ಬಂಡಾಯ ಸಾಹಿತ್ಯವು ತನ್ನ ಸಮಕಾಲೀನ ಸಂದರ್ಭದ ಚಾರಿತ್ರಿಕ ಒತ್ತಡದಲ್ಲಿ ಮೂಡಿದರೂ ಅದಕ್ಕೆ ಪರಂಪರೆಯ ಪ್ರಜ್ಞೆ ಇತ್ತು; ನವೋದಯದವರಿಗಿದ್ದ ಪೂಜಾ ಮನೋಭಾವವಿರಲಿಲ್ಲ. ಇದನ್ನು ಸಾಧ್ಯವಾಗಿಸಿದ್ದು ಮುಖ್ಯವಾಗಿ ಅಂಬೇಡ್ಕರ್, ಪೆರಿಯಾರ್, ಲೋಹಿಯಾ ಮತ್ತು ಮಾರ್ಕ್ಸ್‌ವಾದಿ ಸಿದ್ಧಾಂತಗಳು. ಇಂತಹ ಮೂಲದಿಂದ ಹೊರಟ ಸಾಹಿತ್ಯ ಸಹಜವಾಗಿಯೇ ಬಹುಜನ ಸಮುದಾಯವನ್ನು ಬಡಿದೆಬ್ಬಿಸಲು ಶಕ್ತವಾಯಿತು. ಇದು ಬಂಡಾಯ ಸಾಹಿತ್ಯಕ್ಕಿರುವ ಮುಖ್ಯ ಸಾಮಾಜಿಕ ಗರಿಮೆ.

ಯಾವುದೇ ಸಂಸ್ಕೃತಿಗೆ ಸವಾಲುಗಳು ಜೀವಂತವಾಗಿರುತ್ತವೆ. ಇದು ಸಾರ್ವಕಾಲಿಕ ಮತ್ತು ಸಾರ್ವತ್ರಿಕ ಸತ್ವ. ಈ ಹಿನ್ನೆಲೆಯಲ್ಲಿ ಭಾರತಕ್ಕೂ ಸವಾಲುಗಳಿವೆ ಎಂಬುದು ಸರಳ ಮಾತು. ಕಾರಣ, ಮುಂದುವರೆದ ದೇಶಗಳ ಸಮಕಾಲದಲ್ಲಿ ಇರುವ ಭಾರತದ ಹಿಂದುಳಿದಿರುವಿಕೆಗೆ ಕೇವಲ ವರ್ತಮಾನವಲ್ಲ; ಅದರ ತಾಯಿಯಾದ ಭೂತಕಾಲದಲ್ಲಿಯೂ ಉತ್ತರಗಳಿವೆ. ಅವುಗಳನ್ನು ಶೋಧಿಸಿಕೊಂಡಾಗ ಮಾತ್ರ ಚರಿತ್ರೆಯನ್ನು ಸಮರ್ಪಕವಾಗಿ ಕಟ್ಟಲು ಸಾಧ್ಯವಾಗುವುದು. ಈ ತಾತ್ವಿಕ ನೆಲೆಯಲ್ಲಿ ೭೦-೮೦ರ ದಶಕದ ಸವಾಲುಗಳು ಆನಂತರದಲ್ಲಿ ಕ್ಷೀಣವಾಗದೆ, ಅವುಗಳೊಂದಿಗೆ ಜಾಗತೀಕರಣ, ರಾಜಕೀಯ-ಶಿಕ್ಷಣದ ಕೋಮುವಾದೀಕರಣದಂತಹ ವ್ಯಾಪಕ ಸವಾಲುಗಳು ಸಹ ತಲೆದೋರಿದ್ದನ್ನು ಗುರುತಿಸಿಕೊಳ್ಳಬೇಕು.

ಇದರರ್ಥ ಬಂಡಾಯದ ಸವಾಲುಗಳು ಹಿಂದೆಂದಿಗಿಂತ ಇಂದು ವ್ಯಾಪಕವಾಗಿವೆ ಎಂಬುದು. ಅಂದು ಶತ್ರು ನಮ್ಮ ಒಳಗಿನವನಾಗಿದ್ದನು. ಇಂದು ಹೊರಗಿನವನು ಆಗಿದ್ದಾನೆ. ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷರಂತಹ ಶತ್ರುಗಳು ನೇರವಾಗಿ ಕಾಣುತ್ತಿದ್ದರು. ಇಂದು ಅವರ ಜಾಗದಲ್ಲಿ ಬೇರುಬಿಡುತ್ತಿರುವ ಅಸಂಖ್ಯ ಬ್ರಿಟಿಷರು ಅಪ್ರತ್ಯಕ್ಷವಾಗಿ ನಮ್ಮನ್ನು ಆಳತೊಡಗಿದ್ದಾರೆ. ದೇಶದೊಳಗೆ ಕೋಮುವಾದಿ ಶಕ್ತಿಗಳು ವಿಜೃಂಭಿಸುತ್ತಿವೆ. ಅಂದು ಬಾಬ್ರಿ ಮಸೀದಿ ಉರುಳಿದ್ದಲ್ಲದೆ, ಇತ್ತೀಚಿನ ವರ್ಷಗಳಲ್ಲಿ ಗೋದ್ರಾಗೆ ಬೆಂಕಿಯೂ ಬಿದ್ದಿದೆ. ಇದಕ್ಕೆ ತುಪ್ಪವನ್ನೇ ಸುರಿಯುವ ರೂಪದಲ್ಲಿ ಶಿಕ್ಷಣದ ಕೇಸರೀಕರಣವೂ ನಡೆದಿದೆ. ತಮಿಳುನಾಡಿನಲ್ಲಿ ಮತಾಂತರ ನಿಷೇಧ ಕಾಯ್ದೆಗೆ ಸುಗ್ರೀವಾಜ್ಞೆ ಯಾಗಿದೆ. ಇದು ಒಂದೆಡೆಯಾದರೆ, ದೇಶ ಮತ್ತು ವಿವಿಧ ರಾಜ್ಯಗಳಲ್ಲಿ ಈ ಶಕ್ತಿಗಳೇ ನೇರವಾಗಿ ರಾಜ್ಯಭಾರ ಮಾಡುತ್ತಿರುವುದು ಮತ್ತೊಂದೆಡೆಯಾಗಿದೆ.

ಹೀಗೆ ದೇಶದ ಸ್ಥಿತಿ ವಿಚ್ಛಿದ್ರಕಾರಕವಾಗಿದ್ದು ಭವಿಷ್ಯವನ್ನು ಶಂಕಿಸುವಂತಾಗಿದೆ. ಇದಕ್ಕೆ ಪೋಷಕವಾಗಿ ವಿಘಟಿತ ಜನಪರ ಚಳುವಳಿಗಳೂ ಇವೆ. ಇಂತಹ ಸನ್ನಿವೇಶದಲ್ಲಿಯೂ ಬಂಡಾಯದ ಸಂವೇದನೆಯು ಹೊಸ ತಲೆಮಾರಿನ ಅನೇಕ ಕವಿ, ಬರಹಗಾರರಿಂದ ಮೂಡುತ್ತಿರುವುದು ಆಶಾಸೂಚಿಯಾಗಿದೆ. ದಲಿತ, ಮುಸ್ಲಿಂ, ಸ್ತ್ರೀ ಎಲ್ಲಾ ಶೋಷಿತ ಸಮುದಾಯಗಳಿಂದ ಈ ಸಾಹಿತ್ಯ ಪರಂಪರೆಗೆ ಹೊಸ ವಿಸ್ತರಣೆಗಳೊದಗುತ್ತಿವೆ. ಸಮಕಾಲೀನ ಜಗತ್ತಿಗೆ ತೀವ್ರ ಮುಖಾಮುಖಿ ಗೊಳ್ಳುತ್ತಿರುವ ಬಂಡಾಯದ ಈ ವಿವಿಧ ಸಂವೇದನೆಗಳು ಚಿಂತನೆ ಮತ್ತು ಚಳುವಳಿಗಳನ್ನು ಪೂರಕಗೊಳಿಸುವತ್ತ ತುಡಿಯುತ್ತಿವೆ. ಈ ನಿಟ್ಟಿನಲ್ಲಿ ನಾಡಿನ ವಿವಿಧ ಭಾಗಗಳಲ್ಲಿ ಪುನಃಶ್ಚೇತನ ಗೊಂಡು ಕಳೆದ ಹಲವು ತಿಂಗಳುಗಳಿಂದ ಸಂಘಟಿತ ನೆಲೆಯಲ್ಲಿ ಕ್ರಿಯಾರೂಪಗೊಂಡಿರುವ ಬಂಡಾಯ ಸಂಘಟನೆಯು ತನ್ನ ಜವಾಬ್ದಾರಿ ನಿರ್ವಹಿಸಲು ಸಜ್ಜಾಗಿರುವುದು ಚರಿತ್ರೆಯ ನಡಿಗೆಯಾಗಿದೆ.

---

ಡಾ. ಕಾ.ವೆಂ. ಶ್ರೀನಿವಾಸಮೂರ್ತಿ, ಕನ್ನಡ ಅಧ್ಯಾಪಕ, ಸ್ನಾತಕೋತ್ತರ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಕೋಲಾರ-೫೬೩ ೧೦೧





## ಚೀಳನ್ನು ನುಂಗಿದ ಹಾವಿನ ಕಥೆ

ಅಮೆರಿಕಾ ಸರ್ಕಾರ ಸದ್ದಾಂ ಹುಸೇನ್‌ನನ್ನು ಒಬ್ಬ ಯುದ್ಧಾಪರಾಧಿಯೆಂದು, ತನ್ನ ಜನಗಳ ಹತ್ಯೆ ಮಾಡಿರುವ ಒಬ್ಬ ಕ್ರೂರ ಮಿಲಿಟರಿ ಸರ್ವಾಧಿಕಾರಿಯೆಂದು ಹೇಳುತ್ತದೆ. ಅದು ನಿಜವೂ ಹೌದು. 1988ರಲ್ಲಿ ಆತ ಉತ್ತರ ಇರಾಖಿನ ನೂರಾರು ಹಳ್ಳಿಗಳನ್ನು ನೆಲಸಮ ಮಾಡಿದ; ಸಾವಿರಾರು ಕುರ್ದಿಶ್ ಜನರನ್ನು ರಾಸಾಯನಿಕ ಅಸ್ತ್ರಗಳನ್ನು ಬಳಸಿ ಹಾಗೂ ಮಶೀನ್‌ಗನ್ನುಗಳಿಂದ ಕೊಲ್ಲಿಸಿದ. ಮರುವರ್ಷ ಆತ ತನ್ನ ಜನಹತ್ಯಾ ಕಾರ್ಯವನ್ನು ಯಶಸ್ವಿಯಾಗಿ ಮುಗಿಸಿದನಂತರ ಅಮೆರಿಕಾ ತನ್ನ ಸಹಾಯಧನವನ್ನು ದುಪ್ಪಟ್ಟು ಮಾಡಿ 100 ಕೋಟಿ ಡಾಲರುಗಳಷ್ಟು ನೀಡಿತು. ಅಷ್ಟಲ್ಲದೆ ಉತ್ತಮ ಗುಣಮಟ್ಟದ ಆಂತ್ರ್ಯಾಕ್ಸ್ 'ಬೀಜ'ವನ್ನು ಹೆಲಿಕಾಪ್ಟರುಗಳನ್ನು ಹಾಗೂ ರಾಸಾಯನಿಕ ಮತ್ತು ಜೈವಿಕ ಅಸ್ತ್ರಗಳನ್ನು ತಯಾರಿಸಬಲ್ಲಂತಹ ವಸ್ತುಗಳನ್ನು ಕೊಡುಗೆಯಾಗಿ ನೀಡಿತು.

ಜಾರ್ಜ್ ಬುಶ್ ಹೇಳುವಂತೆ ಅಮೆರಿಕಾ ದೇಶ ಈ ಜಗತ್ತಿನಲ್ಲೇ 'ಅತ್ಯಂತ ಶಾಂತಿಯುತ ದೇಶ'. ದುರಂತವೆಂದರೆ ಕಳೆದ ಐವತ್ತು ವರ್ಷಗಳಿಂದ ಪ್ರತಿ ವರ್ಷ ಅಮೆರಿಕಾ ಒಂದಲ್ಲ ಒಂದು ದೇಶದೊಂದಿಗೆ ಯುದ್ಧ ನಡೆಸುತ್ತಿದೆ.

– ಅರುಂಧತಿ ರಾಯ್

Registration No. 45646/88 Price : 20/-